ಸೋಮನಾಥ

ವೃ ॥ ತ್ರಿಭುವನಸಂಭವಸ್ಥಿತಿಲಯಂಗಳಗೊರ್ವ್ವನೆ ಕರ್ತ್ತನೆಂದು ಸ
ನ್ನ ಭುವಿನಿಕಾಯಸಂಸರಣಘೋರಮಹಾರ್ಣ್ಣವಕರ್ಣ್ಣಧಾರನೆ।
ನ್ನಭಿನಯಿಪನ್ತ ದಕ್ಷಿಣಸುರಾಪಗೆಯೊಳು ನೆರೆಯಲ್ಕೆ ಬಂದನೊ
ಲ್ದಭಿನವಸೋಮನಾಥನಮರೋತ್ಕರನಾಥನನಾಥನನ್ವಯಂ ॥

ಮಧುಸೂದನದೇವ ; ಕ್ರಿ.ಶ. ೧೧೪೯.

[ರಾವ್‌ಬಹದೂರ್ ನರಸಿಂಹಾಚಾರ್ಯರವರ ಕವಿಚರಿತೆ (ಮೊದಲನೆಯ ಸಂಪುಟ, ಪತ್ರಗಳು ೧೩೦-೧೩೨) ಯಿಂದ ಈ ಕವಿಯ ವಿಷಯವಾಗಿ ಸಕಲವೂ ನಮಗೆ ಆಗಲೇ ತಿಳಿದಿರುತ್ತದೆ. ಆದರೂ ಇಲ್ಲಿ ಉದ್ಧರಿಸಲ್ಪಟ್ಟಿರುವ ಪದ್ಯಗಳು ದಾವಣಗೆರೆಯ ಶಾಸನದವಲ್ಲವೇ ಕೊಟ್ಟಕಲ್ಲಿನವಾದ್ದರಿಂದ ಈ ವ್ಯಾಸದಲ್ಲಿ ಸೇರಿಸಬೇಕಾಯಿತು.— ಹೊ. ಕೃ.]

ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಕೊಟ್ಟಕಲ್ಲಿನಲ್ಲಿರುವ ಈ *ಶಾಸನವು ಇಮ್ಮಡಿ ಜಗದೇಕಮಲ್ಲನ ರಾಜ್ಯಾಭ್ಯುದಯಕಾಲದ ೧೧ ನೇ (ಶಕ. ೧೦೭೦) ವರ್ಷದಲ್ಲಿ ಹುಟ್ಟಿದುದು. ಇದರಲ್ಲಿ ಜಗದೇಕಮಲ್ಲನ ಸಾಮಂತ ವೀರಪಾಂಡ್ಯನ ಮಾತುಳನಾದ ವಿಕ್ರಮಾದಿತ್ಯನು ತುಂಗಾ ದಕ್ಷಿಣ ತೀರದಲ್ಲಿರುವ ಸ್ವಯಂಭು ಕೋಟಿಶಂಕರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಇಮ್ಮಡಿತೈಲನಿಂದ ಇಮ್ಮಡಿ ಜಗದೇಕಮಲ್ಲನವರೆಗೂ ರಾಜವಂಶಾವಳಿಯನ್ನೂ, ವೀರಪಾಂಡ್ಯನ ಶೌರ್ಯ ಪ್ರತಾಪಗಳನ್ನೂ ಮತ್ತು ವಿಕ್ರಮಾದಿತ್ಯನ ಗುಣವರ್ಣನೆ ಮೊದಲಾದ ಈಶಾಸನ ಭಾಗವನ್ನು ಮಧುಸೂದನದೇವನೆಂಬುವನು ಬರೆದಂತೆ ಈ ಕೆಳಗಣ ಪದ್ಯದಿಂದ ವಿಶದವಾಗುತ್ತದೆ :

ಕಂ॥ ಶ್ರೀವೀರಪಾಂಡ್ಯದೇವಮಹೀವಲ್ಲಭಮಹಿತಪಾದಪರಮಾರಾಧ್ಯ।
ಶ್ರೀವಿಶ್ರುತಮಧುಸೂದನದೇವರ್ವ್ವಿರಚಿಸಿದರಸೆಯ ಶಾಸನಕೃತಿಯಂ ॥

ಇದರಿಂದ ಮಧುಸೂದನದೇವನು ವೀರಪಾಂಡ್ಯನ ಆಶ್ರಯಕೊಳಗಾದ ಆಸ್ಥಾನಕವಿಯೆಂಬುದು ಸ್ಪಷ್ಟವಾಯಿತು. ಈತನ ಕವಿತೆಯು ಹೃದಯಂಗಮವಾಗಿದೆ. ಈ ಶಾಸನದಿಂದ ಕೆಲವು ಭಾಗಗಳನ್ನಿಲ್ಲಿ ಉದ್ಧರಿಸುತ್ತೇನೆ.

ಕಂ॥ ಅಂತೆಸೆದ ಮೇರುಗಿರಿಯಿಂದಂ ತೆಂಕಣದೆಸೆಯೊಳೆಸೆವ ಭಾರತವರ್ಷಾ।
ಭ್ಯಂತರದೊಳಳಾಕಾನ್ತೆಯ ಕುನ್ತಳಮೆನೆ ಮುಖ್ಯಮಾಯ್ತು ಕುನ್ತಳದೇಶಂ ॥

ವೃ॥ ಶ್ರೀಕಾನ್ತಾಂಭೋಜಗರ್ಭದ್ಯುಮಣಿಮಣಿಕಿರೀಟಾಂಶುಪುಞ್ಜಾಂಘ್ರಿಪೀಠಂ
ಶ್ರೀಕಣ್ಠಂ ನಾಕಸಿಂಧೂಚ್ಛಳದಮಳಲಸತ್ಫೇನಕುಂಭೀ[ಕೀ]ಪ್ರಸೂನಂ।
ಲೋಕೇಶಂ ವಿಕ್ರಮಾದಿತ್ಯರಸನಭಿಮತಾರ್ತ್ಥಂಗಳಂ ಮಾಳ್ಕೆ ನಿಚ್ಚಂ
ಭೂಕೃಷ್ಣಾಧ್ವಾತ್ಮಸೂರ್ಯ್ಯೇನ್ದುಕಪವನವಿಧುವ್ಯೋಮಗಾತ್ರಂ ತ್ರಿಣೇತ್ರಂ ॥

ವೃ॥ ವಿನಯಾಂಭೋನಿಧಿಯೆಂದು ಧರ್ಮ್ಮಪರನೆಂದುದಾತ್ತ ಮಹಾಪುಣ್ಯೈಕಭಾ
ಜನನೆಂದುರ್ವ್ವರೆ ಬಣ್ಣಿಕುಂ ವಿಬು[ಧೋ]ಪಕ್ರೀಂದೀವರಾದಿತ್ಯನಂ।
ತನುವಿಂ ನಿತ್ಯನ ಸುದ್ಯಸತ್ಯನ ನಶೇಷೋರ್ವ್ವೀತಳಸ್ತುತ್ಯನಂ
ಮನುಸಾಹಿತ್ಯನ ನರ್ಕ್ಕಜಂದೆ ಸತತಂ ಶ್ರೀವಿಕ್ರಮಾದಿತ್ಯನಂ ॥

ವೃ॥ ಅ(?)ಯದೊಳ್ವಿಕ್ರಮದೊಳ್ಪರೋಪಕೃತಿಯೊಳ್ವಿಖ್ಯಾತಿಯೊಳ್ನೀತಿಯೊಳ್
ದಯಯೊಳ್ಧರ್ಮ್ಮದೊಳೊಪ್ಪಿನೊಳ್ವಿನಯದೊಳ್ಸಂಶುದ್ಧಿಯೊಳ್ಬುದ್ಧಿಯೊಳ್।
ನಿಯತಂ ತನ್ನವೊಲನ್ಯರಾರೆನೆ ಜಗಂ ಜೇಯಂಬಿನಂ ಸಂತತೋ
ದಯಮಂ ತಾಳ್ದಿದ ಪೇರ್ಮ್ಮೆ ನೂರ್ಮ್ಮಡಿವಲಂ ಶ್ರೀವಿಕ್ರಮಾದಿತ್ಯನ ॥

ವೃ॥ ಜನಶಾಸಂಸ್ತುತನಾದನೇಕಗುಣದಿಂ ಶ್ರೀವಿಕ್ರಮಾದಿತ್ಯದೇ
ವನೊಳಿನ್ನೀ ಕಲಿಕಾಲಕಲ್ಮಷಮಹೀಸಂಶ್ಲಿಷ್ಟರಂ ಕಾಣೆವೆ।
ಗ್ಗಿನೊಳೇನುನ್ನತಸತ್ವಸಂಪದದೊಳಾರಿಂದಗ್ಗಳಂ ನೋಪ್ಪದಂ
ಬಿನೆಗಂ ತಾಳ್ದಿದನತ್ಯುದಾತ್ತಚರಿತಂ ದಿಗ್ವರ್ತ್ತಿಸತ್ಕೀರ್ತಿಯಂ ॥

* Madras Epigraphical collection for 1914, No. 445.

ವೃ॥ ಸ್ಫುರಿತೋರ್ಜ್ಜೋಜ್ವಾಳ ನಿಂಟುಂ ದೆಸೆಗೆ ಪಸರಿಸಲ್ವೈರಿವೀರಾನ್ಧಕಾರಂ
ಪರೆದೋಡಲ್ಭ್ಯಾನತಾಸ್ಯಾಂಬುರುಹವನವದಾನನ್ದಮಂ ತಾಳ್ದಿ ವಿದ್ವಿ ।
ಟ್ತರುಣೀನೇತ್ರೋತ್ಪಳಂಗಳ್ಬರಗೆ ನಿಜಚಮೂ ಚಕ್ರವಾಕೋತ್ಕರಂ ರಾ
ಗರಸಾಂಭೋರಾಶಿಯೊಳ್ಮತ್ತಿರ್ಸೆ ಧರೆಗೆಸೆವಂ ವಿಕ್ರಮಾದಿತ್ಯದೇವಂ ॥

ವೃ॥ ಪರಮಂ ಶ್ರೀವಿಕ್ರಮಾದಿತ್ಯರಸ ನಿನಗೆ ದೀರ್ಘಾಯುಮಂ ಶ್ರೀಯುಮಂ ಕಂ
ಕರನತ್ಯಾನಂದದಿಂದಂ ಕುಡುಗೆಮರಸರಿದ್ವಾರಿಪೂರೋತ್ಪ್ರೇತ್ಛ್ರಿಃ ।
ಕರತಾ[ರಾ]ಧಾರಚಂಚತ್ತರುಣಶಶಿಕಳಾಕಾನ್ತಿಸನ್ತಾನಶೋಭಾ
ಕರಮಂಜತ್ತುಂಗಪಿಂಗದ್ಯುತಿವಿಕಟಜಟಾಜೂಟಕೋಟೀರಭಾರ ॥

ಬಿಜ್ಜಯನಾಯಕ; ಕ್ರಿ.ಶ. ೧೧೭೭.

ಬಿಜಾಪುರದ ಜಿಲ್ಲೆಯ ಅಧಿಕಾರಕ್ಕೆ ಒಳಪಟ್ಟಿರುವ ಜಾಟ ಎಂಬ ಸ್ವತಂತ್ರಸಂಸ್ಥಾನದಲ್ಲಿ ಮೂಡಗಿಹಾಳ್ ಎಂಬ ಗ್ರಾಮವೊಂದುಂಟು. ಇದಕ್ಕೆ ಪೂರ್ವದಲ್ಲಿ ಮಾಳಿಗೆ ಎಂತಲೂ ಮಾಳಿಗಾಪುರವೆಂತಲೂ ಹೆಸರಿತ್ತು. ಈ ಗ್ರಾಮದ ಮಹಾದೇವಾಲಯದ ಮುಂದೆ ಒಂದು [1] ಶಿಲಾಶಾಸನವುಂಟು. ಈ ಶಾಸನದಲ್ಲಿ—'ಕುಂತಳದೇಶಕ್ಕೆ ಸೇರಿದ ತಡೆಕಾಡುನಾಡಿನಲ್ಲಿ ಮಂಗಳವೇಡವೆಂಬ ಒಂದು ಪಟ್ಟಣವುಂಟು; ಅದಕ್ಕೆ ಕನ್ನಮನೆಂಬುವನು ಅಧಿಪತಿಯಾಗಿದ್ದನು; ಅವನಿಗೆ ರಾಜನೆಂಬುವನು ಹುಟ್ಟಿದನು; ರಾಜನಿಗೆ ಅಮ್ಮುಗಿ, ಸಂಕಮ ಮತ್ತು ಜೋಗಮರೆಂಬ ಮೂವರು ಮಕ್ಕಳಾದರು; ಜೋಗಮನಿಗೆ ಹೆಮ್ಮಾಡಿಯು ಹುಟ್ಟಿದನು; ಹೆಮ್ಮಾಡಿಯ ಮಗನೇ ಕಾಲಚೂರ್ಯವಂಶಸ್ಥಾಪಕನಾದ ಬಿಜ್ಜಳನು; ಬಿಜ್ಜಳನ ಮಗನು ರಾಯಮುರಾರಿ ಸೋಯಿ; ಇವನ ಆಶ್ರಿತನೇ ಮಾಳಿಗೆಯ ಪ್ರಭುವಾದ ಬಿಜ್ಜಯನಾಯಕನು. ಈ ಬಿಜ್ಜಯನಾಯಕನು ಶಾಲಿವಾಹನ ಶಕ. ೧೦೯೯ ರಲ್ಲಿ ತನ್ನೊಡೆಯನ ಹೆಸರಿನಲ್ಲಿ ಸೋಮನಾಥೇಶ್ವರ ದೇವಾಲಯವನ್ನೂ, ತನ್ನ ಹೆಸರಿನಲ್ಲಿ ಬಿಜ್ಜೇಶ್ವರ ದೇವಾಲಯವನ್ನೂ, ಅದರ ಬಳಿಯೊಂದು ಸರೋವರವನ್ನೂ ಕಟ್ಟಿಸಿದನು'—ಇತ್ಯಾದಿ ವಿಷಯಗಳು ಉಕ್ತವಾಗಿವೆ.

ಈ ಶಾಸನದ ಕವಿತ್ವವು ಬಹು ಶ್ಲಾಘನೀಯವಾಗಿಯೂ ಲಕ್ಷ್ಯಲಕ್ಷಣಯುಕ್ತವಾಗಿಯೂ ಇದೆ. ಆದರೆ ಶಾಸನದ ಕವಿಯ ಹೆಸರು ಇದರಲ್ಲಿ ಕಾಣಬರುವುದಿಲ್ಲ. ಶಾಸನದಲ್ಲಿ ಉಕ್ತವಾಗಿರುವ ಬಿಜ್ಜಯನಾಯಕನು ಅನೇಕ ಬಗೆಯಾಗಿ ಸ್ತುತಿಸಲ್ಪಟ್ಟಿರುವನು. ಒಂದೆಡೆಯಲ್ಲಿ :—

ವೃ॥ ಕಳಚುರಿರಾಜರಾಜ್ಯಗೃಹದೀಪಕನೆಂಬ ಮಹತ್ತ್ವದೇಳ್ಗೆತ
ನ್ನೊಳ್ ರಿಪುರಾಯದಂಡುಗೆ ಪಡಿಗ್ಗಹನೆಂಬುರುವೀರದೇಳ್ಗೆ ತಂ ।
ನೊಳ್ ಬುಧರೀಯ ವರ್ಣ್ನಕವಿ ಕಂನಡಜಾಣನೆನಿಪ್ಪ ಬಲ್ಮೆ ತಂ
ನೊ[ಳ್] ನೆಲೆಸಲ್ಕುದಾತ್ತನೆನೆ ಬಿಜ್ಜಯನಾಯಕನಿರ್ಪ್ಪ ನುರ್ವ್ವಿಯೊಳು ॥

ವಿದ್ವಾಂಸರು ಬಿಜ್ಜಯನಾಯಕನಿಗೆ 'ವರ್ಣ್ನಕವಿ' 'ಕನ್ನಡಜಾಣ' ಎಂಬ ಬಿರುದುಗಳನ್ನು ಕೊಟ್ಟಂತೆ ಹೇಳಿದೆ. ಮತ್ತೊಂದೆಡೆ :—

"ಸಮಸ್ತಗುಣಗಣಾಲಂಕೃತಾಭಿಧಾನ ಕಳಚುರಿರಾಜರಾಜ್ಯಪ್ರಮುಖಪ್ರಧಾನ ಗೋತ್ರಜನಚಿಂತಾಮಣಿ ಸುಜನವಿಬುಧಚೂಡಾಮಣಿ ವರ್ಣ್ನಕವಿತಾಪ್ರವೀಣ ಕಂನಡಜಾಣ ರಿಪುರಾಯದಂಡುಪಡಿಗಹ ಸತ್ಯಸಂಗ್ರಹ ಶ್ರೀಸೋಮನಾಥಬಿಜ್ಜೇಶ್ವರದೇವಪಾದಾಂಭೋಜಭೃಂಗ ಸಾಹಸೋತ್ತುಂಗ ಮುನಿವಿಪ್ರಜನಫಳಪ್ರದಾಯಕರೆನಿಪ್ಪ ಶ್ರೀಮತು ಮಾಳಿಗೆಯ ಪ್ರಭು ಬಿಜ್ಜಯನಾಯಕರು" ಎಂಬದಾಗಿ ಹೇಳಿದೆ. ಇದರಿಂದ ಬಿಜ್ಜಯನು ರಾಯಮುರಾರಿ ಸೋವಿಯ ಪ್ರಮುಖ ಪ್ರಧಾನನೂ ಮಹಾಕವಿಯೂ ಆಗಿದ್ದನೆಂದು ತಿಳಿದು ಬರುತ್ತದೆ.

'ಕಂ॥ ಪೊಸಕಾಲದ ನವಿಲಾಟಂ ಸಿಸುಗಳ ಮುದ್ದಾಟ ಹರಿಣಹರಿಣಿಯ ನೋಟಂ ।
ರಸಿಕವಿಗಳ ಕರ್ಣಾಟಂ ಪಸಿವುಳಿಯೊಡಗೂಟದಂತೆ ಕನ್ನಡಜಾಣಾ ॥'

ಇತ್ಯಾದಿ ಕೆಲವು ಪದ್ಯಗಳಲ್ಲಿ 'ಕನ್ನಡಜಾಣಾ' ಎಂಬ ಅಂಕಿತವು ಕಾಣಬರುತ್ತದೆ. [2] ಕರ್ಣಾಟಕಕವಿಚರಿತ್ರೆಕಾರರು ಈ ಅಂಕಿತವುಳ್ಳ ಹಲವು ಪದ್ಯಗಳನ್ನು ಉದಹರಿಸಿ "ಕವಿಗಳು ಸ್ವಕೃತಪದ್ಯಗಳ ಕೊನೆಯಲ್ಲಿ ತಮ್ಮ ಹೆಸರು ಬಿರುದುಗಳನ್ನು ಹೇಳಿಕೊಳ್ಳುವ ಸಂಪ್ರದಾಯವಿರುವುದರಿಂದ ಈ ಬಿರುದುಗಳಲ್ಲಿ ಕೆಲವಾದರೂ ಕವಿಗಳಿಗೆ ಅನ್ವ

[1] *Epigraphia Indica*, Vol. XV, pages 315 ff.
[2] ಸಂಪುಟ ೨, ಪುಟ ೧೭೮.

ಯಿಸ ಬಹುದೆಂದು ತೋರುತ್ತದೆ. ಆದರೆ ಕವಿಗಳು ಇಂಥವರು, ಈಕಾಲದವರು ಎಂದು ನಿರ್ಣಯಿಸುವುದು ಸಾಧ್ಯವಲ್ಲ. ಸು. ೧೫೦೦ ಎಂದು ಸ್ಥೂಲವಾಗಿ ಕಾಲವನ್ನು ಮೇಲೆ ಕೊಟ್ಟಿದ್ದೇವೆ." ಎಂಬದಾಗಿ ಬರೆದಿರುವರು. ಮೇಲಿನ ಶಾಸನದ ಬಿಜ್ಜಯನಾಯಕನು ಪ್ರೌಢಕವಿಯೆಂದೂ, ಅವನಿಗೆ ವಿದ್ವಾಂಸರೇ 'ವರ್ಣ್ಣಕಕವಿ' 'ಕನ್ನಡ ಜಾಣ' ನೆಂಬ ಬಿರುದುಗಳನ್ನು ಕೊಟ್ಟಿದ್ದರೆಂದೂ ತಿಳಿದವು. 'ಕನ್ನಡಜಾಣ'ನೆಂಬ ಅಂಕಿತವುಳ್ಳ ಪದ್ಯಗಳ ಕರ್ತೃವು ಬಿಜ್ಜಯನಾಯಕನೇ ಎಂದು ಊಹಿಸುವುದರಲ್ಲಿ ಅಸಂಭವವೇನೂ ಇರಲಾರದೆಂದು ತೋರುತ್ತದೆ. ಈ ಊಹೆಯು ಸ್ಥಿರವಡುವುದಾದರೆ 'ಕನ್ನಡಜಾಣ'ನನ್ನು ಕ್ರಿ. ಶ. ೧೫೦೦ ರಿಂದ ಕ್ರಿ. ಶ. ೧೧೨೦ ಕ್ಕೆ ಒಯ್ಯ ಬೇಕಾದೀತು. ಇವನು ಯಾವಯಾವ ಗ್ರಂಥಗಳನ್ನು ಬರೆದಿರುವನೋ ಗೊತ್ತಿಲ್ಲ. ಬಿಜ್ಜಯನು ಚತುರ್ಥಕುಲಕ್ಕೆ ಸೇರಿದವನು.

ಕಂ ॥ ಆತನ ವಲ್ಲಭೆ ಕಾಂತಾಜಾತಶಿರೋಮಣಿ ಸರೋಜಲೋಚನೆ ವಸುಧಾ ।
ಮಾತೆಯೆನಿಪ್ಪಳು ವಿದಿತಂ ಮಾತೇಂ ಸಾವಿತ್ರಿದೇವಿ ಮಹಿಮಾಗುಣದಿಂ ॥

ವೃ ॥ ಜನನುತೆ ಹಂಸಯಾನೆ ವಿಭುಬಿಜ್ಜಯನಾಯಕಚಿತ್ತಭೃಂಗಪ
ದ್ಮಿನಿ ಕಳಹಂಸಗಾಮಿನಿ ಲತಾಂಗವಿಳಾಸಿನಿ ಸಾಯಿಯಕ್ಕನೊ ।
ಳ್ಪಿನಕಣಿ ದಾನಶೀಳೆ ಗುಣಶೀಳೆ ಯಶೋಧಿಕೆ ನಿತ್ಯಪುಣ್ಯಭಾ
ಗಿನಿ ರತಿ ಗೌರಿ ಸೀತೆಯೆನಿಪಂನಳೆ ದೇವಿ ಧರಾತಳಾಗ್ರದೊಳು ॥

ಈತನ ವಂಶಾವಳಿಯನ್ನು ತಿಳಿಸುವ ಹಲವು ಪದ್ಯಗಳನ್ನು ಇಲ್ಲಿ ಉದ್ಧರಿಸುತ್ತೇನೆ :—

ಕಂ ॥ ಆ ಪುರದಧಿಪಂ ಪ್ರಭು ದಿಗ್ವ್ಯಾಪಕನಿರ್ಮಳಯಶೋವಿತಾನಂ ನುತಲ ।
ಕ್ಷ್ಮೀಪತಿ ಪರೋಪಕಾರ ಬ್ಯಾಪಾರಂ ಮಲ್ಲಗೌಂಡನುದ್ಧತಮಲ್ಲಂ ॥

ಕಂ ॥ ನೆಗರ್ದ್ದಂ ತತ್ತನಯಂ ಚಾರುಗುಣಂ ಶ್ರೀಬಲ್ಲಗೌಂಡನಾತನ ತನಯಂ ।
ಜಗತೀಜನೈಕಹಿತಮಂತ್ರಗುಣಂ ಪ್ರಭುಮಲ್ಲಗೌಂಡನನುಪಮಚರಿತಂ ॥

ಕಂ ॥ ಆತನ ಸತಿ ನುತ ಗುಣವತಿ ಸೀತಾರುಂಧತಿ ವಿವೇಕವಿದ್ಯಾಧರೆ ಭೂ ।
ಖ್ಯಾತೆ ಪತಿವ್ರತೆ ದಾನಜಾತೋನ್ನತೆ ಮುದ್ದಿಯಕ್ಕ ನೊಳ್ಪಿಂ ನೆಗರ್ದ್ದಳು ॥

ವೃ ॥ ವಿರತದ್ದಂಪತಿಗಳ್ಗುದಾತ್ತನತುಳಂ ಶ್ರೀಶಂಭುಗಂ ಗೌರಿಗಂ
ಹರಿಗಂ ಲಕ್ಷ್ಮಿಗವಾ ಸುರಾಧಿಪತಿಗಂ ಪೌಳೋಮಿಗಂ ಷಣ್ಮುಖಂ ।
ಸ್ಮರರಾಜಂ ವಿಳಸಜ್ಜಯಂತನುದಿತಂ ಸತ್ಪುತ್ರ ನಾದಂತಿರಾ
ದರದಿಂ ಬಿಜ್ಜಯನಾಯಕಂ ತನಯನಾದಂ ಧಾತ್ರಿ ಬಾಪ್ಪೆಂಬಿನಂ

ಭಾಸ್ಕರ ; ಕ್ರಿ.ಶ. ೧೧೨೭.

ನಿಜಾಂ ಸರಕಾರಕ್ಕೆ ಸೇರಿದ ಪಟ್ಟನಕೆರುವು ಎಂಬ ಊರಿನ ಸುಬೇದಾರಕಛೇರಿಯ ಬಳಿಯೊಂದು [1]ಶಾಸನವುಂಟು. ಇದು ಚಾಳುಕ್ಯ ಭೂಲೋಕಮಲ್ಲ ಸೋಮೇಶ್ವರನ ಕಾಲದ ಚಾಳುಕ್ಯವಿಕ್ರಮ ವರ್ಷ ೫೧ ರಲ್ಲಿ (ಕ್ರಿ.ಶ. ೧೧೨೭) ಬರೆದುದು. ಇದರಿಂದ ಸೋಮೇಶ್ವರನು 'ಪಟ್ಟಬಂಧೋತ್ಸವ ಸಮಯ' ದಲ್ಲಿ ಜೋಯಿಸಿಗಂ ನನ್ನಿಯ ಭಟ್ಟರಿಗೆ 'ವಿಜಯಯಾತ್ರೆಗೆ ಲಗ್ನಮಂ ಕೊಟ್ಟ ನಿಮಿತ್ತ' ದಿಂದ ಭೂದಾನಮಾಡಿದನೆಂದು ತಿಳಿಯಬರುತ್ತದೆ. ಶಾಸನಾಂತ್ಯದಲ್ಲಿ

'ಕಂ ॥ ನಿರತಿಶಯೋನ್ನತಮತಿ ಭಾಸ್ಕರ ಸರಸಕವೀಂದ್ರ ರಚಿತ ಶಾಸನಮಂ ಬಿ ।
ತ್ತರದಿಂ ಪ್ರತಿಕಂಟಂ ಸಾಕ್ಷರನಿಳಯಂ ತಿಲ್ಲಿ ಭಾಸ್ಕರಯ್ಯಂ ಬರದ ॥'

ಎಂಬ ಪದ್ಯದಿಂದ ಶಾಸನಕವಿಯು ಭಾಸ್ಕರನೆಂದು ಸ್ಪಷ್ಟವಾಗುತ್ತದೆ. ಈ ಸರಸಕವೀಂದ್ರ ಭಾಸ್ಕರನ ಕವಿತೆಯು ಬಹಳ ಪ್ರೌಢವಾಗಿದೆ. ಈಶಾಸನದಿಂದ ಕೆಲವು ಪದ್ಯಗಳನ್ನು ಉದಹರಿಸುತ್ತೇನೆ—

ವೃ ॥ ಶ್ರೀಮಚ್ಚಾಳುಕ್ಯವಂಶೋದ್ಭವ ನನುಪಮಿತೋದ್ಯದ್ಭುಜಾದಂಡಶೌರ್ಯೋ
ದ್ದಾಮಂ ವೀರಾರಿಭೂಭೃತ್ಪ್ರಕರನಿಶಿತವಜ್ರಾಯುಧಂ ಕ್ಷತ್ರವಿದ್ಯಾ ।
ಧಾಮಂ ರಟ್ಟಾನ್ವವಾಯಪ್ರಬಳತರತಮಸ್ತೋಮಮಾರ್ತಾಂಡತೇಜ
ಸ್ತೋಮಂ ತಾನೆಂಬಿನಂ ಮಿಕ್ಕೆಸೆದ ನೆಸೆದಳಂ ತೈಲಪಕ್ಷೋಣಿಪಾಳಂ ॥

---

[1] ಈ ಶಾಸನವನ್ನು ನಿಜಾಂಸರಕಾರದ ಆರ್ಕಿಯೋಲಾಜಿಕಲ್ ಇಲಾಖೆಯ ಗ್ರಂಥಮಾಲೆಯಲ್ಲಿ ನಾನು ಶೀಘ್ರದಲ್ಲೇ ಪ್ರಕಟಿಸುವನಿದ್ದೇನೆ.

ವೃ ॥ ಸಕಳಧಾಳಾಪತಿ ನಾನೆ ಪೇಳದೊಡದೇಂ ದದ್ದುದ್ದಿಗಿಲ್ಲೆಂಬ ಚೋ
ಳಕಳಿಂಗಾಂಗವರಾಳವಾಳವಮರುನ್ನೇಪಾಳಪಾಂಚಾಳ ರಾ ।
ಷ್ಟ್ರಕದಂಬಂಗಳೊಳುಣ್ಮಿ ಪೊಣ್ಮುವ ಮಹತ್ಕ್ರೋಧಾನಳೋದ್ಯತ್ಸಿಖಾ
ಪ್ರಕರಂ ಪೇಳದೆ ವಿಕ್ರಮೋನ್ನತಿಕೆಯಂ ಶ್ರೀವಿಕ್ರಮಾದಿತ್ಯನ ॥

ವೃ ॥ ನೊಳೆವಿಕ್ತ್ರಿತ್ರದ ಕೋಳಬಾಳಜಳದಿಂ ಮಿಯೊಂದಮಿತ್ರಾಂಗನಾ
ಕುಳಬಾಷ್ಪಪ್ರದನದಿಂ ತಳತ್ತುರ್ ರಿಪುಸೇನಾ ಚಕ್ರರಕಾಂತ್ರಬುಮಿಂ ।
ಬಳದತ್ತೀಗಳುಮಾರಿತಾರಿಂತಗಳುತ್ತಾತ್ಕಳಿಂಗವ್ರಾತಂಗಸಂ
ಕುಳದಾನಪ್ಲವದಿಂ ಪರಾಕ್ರಮವನಂ ಭೂಲೋಕಮಲ್ಲಾಂಕನೆ ॥

ಭಾಸ್ಕರ; ಕ್ರಿ.ಶ. ೧೧೮೭.

ಚಾಳುಕ್ಯ ಸೋಮೇಶ್ವರನ ಮಹಾಪ್ರಚಂಡದಂಡನಾಯಕನಾದ ಮಾಳಪರಸನು ಸಿಂದವಾಡಿಸಾಸಿರದಲ್ಲಾಳು ತ್ತಿದ್ದು ಶಕ ೧೧೦೮ ರಲ್ಲಿ ನಂದಾಪುರದ ಶ್ರೀಮಲ್ಲಿಕಾರ್ಜ್ಜುನದೇವರ ನಿವೇದ್ಯ ನಂದಾದೀವಿಗೆಗೆ ಕೆಲವು ಸುವರ್ಣಾದಾಯಗಳನ್ನು ಧಾರೆಯೆರದನೆಂದು ಒಂದು [1]ಶಾಸನದಲ್ಲಿ ಹೇಳಿದೆ. ಈ ಶಾಸನವನ್ನು "ಸುಕವಿಪದ್ಮಪ್ರಭಾಕರೋ ಭಾಸ್ಕರಃ" ಎಂಬವನು ಬರದಂತೆ ಶಾಸನದ ಕಡೆಯ ಪದ್ಯದಿಂದ ತಿಳಿದುಬರುತ್ತದೆ. ಅಲ್ಲದೆ ಈ ಕವಿಗೆ 'ಸುಕವಿಮುಖ ಮುದ್ರೆ' ನೆಂಬ ಬಿರುದೂ ಇದ್ದಂತೆ ತಿಳಿಯಬರುತ್ತದೆ. ಭಾಸ್ಕರನು ಸಂಸ್ಕೃತ ಕರ್ಣಾಟ ಭಾಷೆಗಳೆರಡರಲ್ಲೂ ಪಾಂಡಿತ್ಯವನ್ನು ಸಂಪಾದಿಸಿದ್ದನು. ಹೆಚ್ಚಿನ ವಿಚಾರವಾವುದೂ ಇದರಿಂದ ತಿಳಿಯುವುದಿಲ್ಲ. ಇದರೊಂದ ಒಂದು ಪದ್ಯವನ್ನೆತ್ತಿ ಬರೆಯುತ್ತೇನೆ—

ಕಂ॥ ಪವನಪಥದನ್ನುಪಾಶ್ರಿತಕವಿರಾಜನನನ್ತನನ್ತೆ ಬಹುಭೋಗಧರಂ ।
ದಿವಸಕರನಂತೆ ತೇಜೋಧನನಂ ಮಾಳಪಚಮೂಪನೆಸೆವಂ ಧರೆಯೊಳ್ ॥

ಉದಯಾದಿತ್ಯ; ಕ್ರಿ.ಶ. ೧೧೫೦.

ಉದಯಾದಿತ್ಯಾಲಂಕಾರವೆಂಬ ಒಂದು ಅಲಂಕಾರ ಗ್ರಂಥವನ್ನು 'ವಸುಧಾನಾಥನ ಸೋಮನಾಥನ ಸುತಂ ಚೋಳೋದಯಾದಿತ್ಯಂ' 'ಸೋಮಮಹೀಭೃನ್ನಂದನಂ' ಎಂದು ಹೇಳಿಕೊಂಡಿರುವ ಉದಯಾದಿತ್ಯನೆಂಬಾತನು ಆವನೋ ಬರೆದಿದ್ದಾನೆ.[2] ಈತನು ಒಬ್ಬ ಸೋಮನಾಥನೆಂಬ ಚೋಳರಾಜನ ಮಗನೆಂದು ತಿಳಿಯಬರುತ್ತದೆ. ಈತನು ಪಟ್ಟಾಭಿಷಿಕ್ತನಾಗಿ ಆಳುತ್ತಿದ್ದಂತೆಯೂ ತೋರುತ್ತದೆ. ಈ ಕವಿಯ ಕಾಲವು ಸುಮಾರು ಕ್ರಿ.ಶ. 1150 ಇರಬಹುದೆಂದು ಕವಿಚರಿತ್ರಕಾರರು ಊಹಿಸಿರುವರು.

ಬಳ್ಳಾರಿ ಜಿಲ್ಲೆಗೆ ಸೇರಿದ ತಾಡಿಪತ್ರಿ ಎಂಬ ಊರಲ್ಲಿ ಪ್ರಸಿದ್ಧವಾದ ರಾಮೇಶ್ವರನ ದೇವಾಲಯ ವೊಂದುಂಟು. ಅದರ ರಾಜಾಂಗಣದ (ಪ್ರಾಕಾರ) ವಾಯುವ್ಯ ಮೂಲೆಯಲ್ಲಿ ಒಂದು [3]ಶಿಲಾಶಾಸನವುಂಟು. ಅದರಿಂದ 'ಭುವನ ಪ್ರಖ್ಯಾತಸೋಮಾನ್ವಯಜನಿತ' ಉದಯಾದಿತ್ಯಮಹಾರಾಜನೊಬ್ಬನು '[4]ಪೆನ್ನಪರಿನಾಡ ರಾಜಧಾನಿಯಾದ [5]ತಾಟಿ ಪಾಂಪುರದ ನೆಲೆವೀಡಿನಲ್ಲಿ ರಾಜ್ಯಭಾರವನ್ನು ಮಾಡುತ್ತಿದ್ದನು; ಈ ಉದಯಾದಿತ್ಯನ ತಂದೆ ಸೋಮಿದೇವನು; ಉದಯಾದಿತ್ಯನು ಶಕ ವರ್ಷ ೧೧೨೦ ನೆಯ ಕಾಳಯುಕ್ತ ಸಂವತ್ಸರದ ಮಾಘ ಬ. ೧೫ ಬೃಹಸ್ಪತಿವಾರದ ಸೂರ್ಯಗ್ರಹಣದಂದು ಅಲ್ಲಿಯ ಚಂದ್ರನಾಥಪಾರ್ಶ್ವನಾಥ ದೇವರುಗಳ ಬಸದಿಯ "ಖಂಡಸ್ಫುಟಿತ ಜೀರ್ಣೋದ್ಧಾರಕ್ಕಂ ದೇವರಷ್ಟವಿಧಾರ್ಚನೆಗಂ ಆಹಾರದಾನಕ್ಕಂ" ವೃತ್ತಿಯನ್ನು ಬಿಟ್ಟನು; ಎಂಬೀ ವಿಷಯಗಳು ತಿಳಿದುಬರುತ್ತವೆ. ಈ ಕಾರಣಗಳಿಂದ ಅಲಂಕಾರ ಗ್ರಂಥ ಕರ್ತೃವಾದ ಉದಯಾದಿತ್ಯನು ಇವನೇ ಆಗಿರಬಹುದೆಂದು ತೋರುತ್ತದೆ.[6]

---

1 Madras Epigraphical collection for 1915, No. 546.
2 *Lives of Kannada Poets*, Vol. I, pages 132-133.
3 Madras Epigraphical collection for 1892, No. 338.
4 ವೃ॥ ಮೇರುಮಹಾಮಹೀಧರದ ತೆಂಕಣ ಭಾರತವರ್ಷದೊಳ್ಸನೋ
ಹಾರಿಯುದೆಂಬಿನನೊಳ್ಪು ಕುಂತಳದೇಶದ ಪೂರ್ವಭಾಗದೊಳ್ ।
ಸಾರಿ ಮಿರಿಪ್ಪುದುಧ್ಧರಣೀತಳಮಂಡದಿಂದೆ ತೆಂಕಣಾ
ಧಾರಿಣಿಯಲ್ಲಿ ಪೆನ್ನಪರಿನಾಡು ನಿರಂತರ ಒಪ್ಪಿ ತೋರ್ಬುಗುಂ॥
5 Tādpatri in the Bellary district.
6 [ಆದರೆ ಚೋಳೋದಯಾದಿತ್ಯನೆಂದು ಶಾಸನದಲ್ಲೆಲ್ಲಿಯೂ ಇಲ್ಲ. ಈತನು ಕವಿಯೆಂಬುದೂ ಪ್ರಕಟಿತವಾಗಿಲ್ಲ. ಅಲ್ಲದೆ ಚೋಳವಂಶವು ಸೂರ್ಯವಂಶವೇ ಹೊರತು ಚಂದ್ರವಂಶವಲ್ಲ. ಶಾಸನದಲ್ಲಿ ಹೊಗಳಲ್ಪಟ್ಟ ಉದಯಾದಿತ್ಯನು "ಸೋಮಾನ್ವಯಜನಿತ" ನು. ಈತನ ಜಾತ ಕರಿಗಂಗನೆಂತಲೂ, ಗಂಗಾವನಿಪಾಲನೆಂತಲೂ ಕರೆಯಲ್ಪಟ್ಟಿರುತ್ತಾನೆ.—ಹೆ. ಕೃ.]

ಚೋಳೋದಯಾದಿತ್ಯನು "ಸ್ವತಂತ್ರರಾಜನಾಗಿದ್ದಿರಲಾರನು ; ಆವದೊರೆಯಲ್ಲಿಯೋ ಸಾಮಂತರಾಜನಾಗಿದ್ದಿರಬೇಕು" ಎಂಬುದು ಕವಿಚರಿತ್ರೆ ಕಾರರ [1]ಅಭಿಪ್ರಾಯ. "ಸ್ವಸ್ತ್ಯನೇಕಸಮರಸಂಘಟ್ಟಸಂಜಾತವಿಜಯಲಕ್ಷ್ಮೀಸಮಾಲಿಂಗಿತವಿಶಾಲವಕ್ಷಸ್ಥಳಂ ಕ್ಷತ್ರಿಯಪವಿತ್ರ ಭುವನತ್ರಿನೇತ್ರ ನಾದುಂಬರಾಭರಣಂ ಪಾಂಡ್ಯಗಜಕೇಸರಿ ಕುಲುಕಡೆಪ್ರುರವರಾಧೀಶ್ವರಂ ಅಷ್ಟಮಹಾಸಿದ್ಧಿ ಸಿದ್ಧವಟದೇವದಿವ್ಯಶ್ರೀಪಾದಪದ್ಮಾರಾಧಕ ಪಾಟಳಸಾಧಕನಾಮಾದಿಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಮಂಡಳೇಶ್ವರಂ ತ್ರೈಳೋಕ್ಯಮಲ್ಲ ಭುಜಬಳವೀರನಾರಾಯಣ ಪ್ರತಾಪಕುಮಾರನುದಯಾದಿತ್ಯ" ನೆಂಬ ಪ್ರಶಸ್ತಿಯನ್ನೂ "ಉದಯಾದಿತ್ಯದೇವ ಮಹಾರಾಜನು" ಎಂಬದಾಗಿ ಹೇಳಿರುವುದನ್ನೂ ಈತನ ತ್ರೈಲೋಕ್ಯಮಲ್ಲನೆಂಬ ಬಿರುದನ್ನೂ, ಈಶಾಸನದಲ್ಲಿ ತನ್ನ ಸಂರಾಜನಾವನ ಹೆಸರನ್ನು ಕೊಡದೆ ಇರುವುದನ್ನೂ ಗಮನಿಸಿದರೆ ಉದಯಾದಿತ್ಯನ ವಂಶೀಯರು ಮೊದಲುಮೊದಲು ಕಲ್ಯಾಣದ ಚಾಳುಕ್ಯರಿಗೆ ಸಾಮಂತರಾಗಿದ್ದರೆಂದೂ ಕಡೆಕಡೆಗೆ ಸ್ವತಂತ್ರರಾಗಿ ಪೆನ್ನಪರಿನಾಡನ್ನು ಆಳುತ್ತಿದ್ದರೆಂದೂ ನಿಶ್ಚಿತವಾಗುತ್ತದೆ.

ಚೋಳರ ಪ್ರಾಬಲ್ಯವು ತಗ್ಗಿದಮೇಲೆ ಈ ವಂಶೀಯರನೇಕರು ಚಾಳುಕ್ಯರ ಅಧೀನರಾಗಿದ್ದರು. ಚಾಳುಕ್ಯರ ಬಲವು ಕುಂದುತ್ತ ಕುಂದುತ್ತ ಸಾಮಂತರನೇಕರು ಸ್ವತಂತ್ರರಾದರು. ಹಾಗೆ ಸ್ವತಂತ್ರರಾದವರಲ್ಲಿ "ಚೋಳೋದಯಾದಿತ್ಯನೂ" ಒಬ್ಬನಾಗಿರಬಹುದು.

ಈ ಶಾಸನದಿಂದ ಉದಯಾದಿತ್ಯನ ಅನ್ವಯಾದಿಗಳನ್ನು ತಿಳಿಸುವ ಕೆಲವು ಭಾಗಗಳನ್ನು ಉದ್ಧರಿಸುತ್ತೇನೆ—

ಉದಯಾದಿತ್ಯನ ಅನ್ವಯ

ವೃ॥ ಭುವನಪ್ರಖ್ಯಾತ ಸೋಮಾನ್ವಯಜನಿತ ಮಹಾರಾಜರುತ್ತುಂಗ ಕೀರ್ತಿ-
ರವಿಪೀಠಾಧ್ಯಾಸಿತರ್ಕ್ಕಳ್ಬಲಬರರಸುಗಳಿಂತಿನೆ ಸಂದರ್ದ್ದರಾರ ।
ಪಿವರಾಂತರ್ವ್ವರ್ತ್ತಿಕೀರ್ತ್ತಿರ್ದ್ವಿಜರವರೊಳುದಾತ್ತಪ್ರತಾಪಪ್ರಭಾವ
ಪ್ರವಿಧೂತಾನ್ಯಾವಲೇಪಂ ನೆಗಳ್ದನವನಿಯಂ ಪಾಲಿಸಲ್ಕತ್ತಿರಾಜಂ ॥

ವೃ॥ ಅತ್ಯರಸಂಗೆಪುಟ್ಟಿದ ತನೂಭವ ನಾಹವಮಲ್ಲದೇವನಾ
ದಿತ್ಯಸಮಪ್ರತಾಪನಿಧಿ ತತ್ಸತಿ ಬಾಗಲದೇವಿ ತಾನರುಂ ।
ಧ[ತ್ರ್ಯ]ವಮಾನ ಕತ್ತ್ರಿಯಸುತಂ ಕಲಿಗಂಗ ಮಹೀಭುಜಂ ಪರಾ
ದ್ಧತ್ಯವಿಭೇದಿ ತದ್ರಮಣಿ ತಾಂ ಮಹದೇವಿ ಯೆನಿಪ್ಪಳೊಪ್ಪುವಳ್ ॥

ವೃ॥ ಆಗಂಗಾವನಿರಾಜಕಂಗವೆಸಕಂ ಬೆತ್ತಾ ಮಹಾದೇವಿಗಂ
ರಾಗಂ ಕೈಮಿಗೆ ಪುಟ್ಟಿದಂ ಪ್ರಭುಸುತಂ ಶ್ರೀಸೋಮಿದೇವಂ ಜಯೋ ।
ದ್ವೋಗಂ ತಂನ್ನಿಸರಾಂತ ಭೂಮಿಸುತಗಂ ಭೂಭೃತ್ತನೂಜಾತೆಗಂ
ಶ್ರೀಗಂ ಕಂಚಲದೇವಿ ತಾನೆ ಸಮನಾದಳ್ ಭಾಗ್ಯಸೌಭಾಗ್ಯದೊಳ್ ॥

ಕಂ॥ ಒದವಿದ ರಾಜ್ಯಶ್ರೀಯಿಂ ದುದಾತ್ತನೆನಿಸಿರ್ದ್ದ ಸೋಮಿದೇವನೃಪಂಗಂ ।
ಪದೆಪಿನ ಕಂಚಲದೇವಿಗಮುದಯಿಸಿದಂ ಪ್ರಿಯಕುಮಾರನುದಯಾದಿತ್ಯಂ ॥

ಉದಯಾದಿತ್ಯನ ಪ್ರತಾಪ.

ವೃ॥ ಮದ[ವ*]ದ್ವೈರಿನೃಪಾಳಸೈನ್ಯತಿಮಿರಪ್ರಧ್ವಂಸನಂ ಗೆಯ್ದು ಪೇ
ರ್ಚ್ಚಿರ್ದ ರಾಗಂ ನಿಜಮಂಡಳಕ್ಕೆಸೆಯೆ ದಿಕ್ಚಕ್ರಾಂತಮಂ ತಂನ ತೇ ।
ಜದೆಗುಪ್ಪಿಂ ಸಮುಪಾತ್ತವಭ್ಯುದಯಮಂ ಕೈಕೊಂಡ ಸ್ಯಪಿಂದಮಿಂ
ತುದಯಾದಿತ್ಯಕುಮಾರನಪ್ರತಿಹತೋದಗ್ರಪ್ರತಾಪೋದಯಂ ॥

ಕಂ॥ ಪ್ರತ್ಯರ್ತ್ಥಿನೃಪತಿಬಳತಿಮಿರಾತ್ಯಯಮಂ [ಮಾ]ಳ್ಪ ತೇಜದಿಂ ಸೋಮನೃಪಾ ।
ಪತ್ಯನೆನಿಸಿದ ಕುಮಾರಂ ಪ್ರತ್ಯಕ್ಷಂ ತಾನೆ ನೋಳ್ಪಡುದಯಾದಿತ್ಯಂ ॥

ವೃ॥ ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್ ಕಾನೀನನಂ ದಾನದೊಳ್
ಹರಿಯಂ ವಿಕ್ರಮಶಕ್ತಿಯೊಳ್ ಯಮಜನಂ ಸತ್ಯೋಕ್ತಿಯೊಳ್ ತೀವ್ರಭಾ ।
ಸ್ಕರನಂ ತೇಜದೊಳಂಬುಜಪ್ರಭವನಂ ಚಾತುರ್ಯದೊಳ್ ಹೇಮಭೂ
ಧರಮಂ ಧೈರ್ಯದೊಳೆಯ್ದೆ ಪೋಲ್ವನುದಯಾದಿತ್ಯೋರ್ವ್ವರಾವಲ್ಲಭಂ ॥

ಕಂ॥ ಉದಯಾದಿತ್ಯಕುಮಾರಂ ಕದನದೊಳಿದಿರಾದ ಮದವದಹಿತನೃಪೇಭ್ಯ ।
ತ್ಪುದತಿಯರ ವದನವನಜಕ್ಕದವಕಲಂ ಮಾಡುವಂದವಿದು ಬಸವಂದ ॥

[1] *Lives of Kannada Poets*, Vol. I, page 130.

## ಲಕ್ಷ್ಮೀಧರ ಮತ್ತು ಮಧುರ ; ಕ್ರಿ. ಶ. ೧೪೧೦.

ಕಮಲಾಪುರಕ್ಕೂ ಹಂಪೆಗೂ ಮಧ್ಯಮಾರ್ಗದಲ್ಲಿರುವ ಕೃಷ್ಣದೇವರ ಗುಡಿಯ ಸಮೀಪದ ಒಂದು ಮಂಟಪದಲ್ಲಿ [1]ಶಿಲಾಶಾಸನವೊಂದುಂಟು. ಇದರಿಂದ ದೇವರಾಯನ ಸಚಿವನಾಗಿದ್ದ [2]ಲಕ್ಷ್ಮೀಧರನು ಪಂಪಾಕ್ಷೇತ್ರದ ಪೂರ್ವದಿಗ್ಭಾಗದಲ್ಲಿರುವ ಮಾಲ್ಯವತ್ಪರ್ವತದ ತೆಂಕಣದೆಸೆಯ ಗುಹೆಯೊಂದರಲ್ಲಿ ಶಕ. ೧೩೩೨ ನೆಯ ವಿರೋಧಿ ಸಂವತ್ಸರದ ಫಾಲ್ಗುಣ ಪ್ರಥಮವಾಸರ ಗುರುವಾರದಂದು "ಸಮುತ್ಸೋತ್ಸವ ಮುಣ್ಕೆ ಪೊಣ್ಕರೆ ಮಹಾಗಣನಾಥನ ಪ್ರತಿಷ್ಠೆಯಂ" ಮಾಡಿದನೆಂಬದಾಗಿ ತಿಳಿಯಬರುತ್ತದೆ.

"ಕವೀಂದ್ರಾಭರಣಮಧುರ" ನು "ಪಿಂಗದೆ ಲಕ್ಷ್ಮೀಧರಸಚಿವಂಗಾಚಂದ್ರಾರ್ಕ್ಕಮೊದವಿದಾಯುಂ ಶ್ರೀಯುಂ, ಸಂಗತಿವಡೆವಿರೆ ಬರೆದಂ ಮಂಗಳಮಂ . . . . ." ಎಂದು ಶಾಸನಾಂತ್ಯದಲ್ಲಿದೆ. ಶಾಸನಕೃತಿಪತಿಯಾದ ಲಕ್ಷ್ಮೀಧರ, ಕೃತಿಕರ್ತನಾದ ಮಧುರ ಇವರ ವಿಚಾರವನ್ನು ಚರ್ಚಿಸುವುದೇ ನಮ್ಮ ಪ್ರಕೃತಕರ್ತವ್ಯವು.

ಕವಿಚರಿತ್ರೆಯಲ್ಲಿ[3], ಒಬ್ಬ ಮಧುರನು ಧರ್ಮ್ಮನಾಥಪುರಾಣ, ಗುಮ್ಮಟಾಷ್ಟಕ ಇತ್ಯಾದಿ ಗ್ರಂಥಗಳನ್ನು ಬರೆದಿರುವಂತೆ ಕವಿಚರಿತ್ರೆಕಾರರು ಬರೆದಿದ್ದಾರೆ. "ಇವನು ಜೈನಮತದವನು ; ವಾಜಿವಂಶಕ್ಕೆ ಸೇರಿದವನು , ಭಾರದ್ವಾಜಗೋತ್ರದವನು ; ಇವನ ತಂದೆ ವಿಷ್ಣು ; ತಾಯಿ ನಾಗಾಂಬಿಕೆ ; ಬುಕ್ಕರಾಯನ ಸುತ ಹರಿಹರರಾಯನ ಪ್ರಧಾನನಾದ ಮುದ್ದದಂಡೇಶ್ವರನು ಇವನ ಪೋಷಕನು ; 'ಭೂನಾಥಾಸ್ಥಾನಚೂಡಾಮಣಿ ಮಧುರಕವೀಂದ್ರಂ' ಎಂಬುದರಿಂದ ಇವನು ಹರಿಹರನ ಆಸ್ಥಾನಕವಿಯಾಗಿದ್ದಿರಬೇಕು. ಈತನಿಗೆ ಕಲಾವಿಲಾಸ, ಕವಿರಾಜಕಲಾವಿಲಾಸ, ಕವಿಮಾಧವ, ಮಧುರ, ಮಾಧವ, ಸರಸಕವಿರಸಾಲವಸಂತ ಭಾರತೀಮಾನಸಕೇಳೀರಾಜಹಂಸ, ವಿಶ್ವವಿದ್ಯಾಸಮುದಯ, ಸುಮನಸ್ಸಂಚರಚಂಚರೀಕ ಎಂಬ ಬಿರುದುಗಳಿದ್ದಂತೆಯೂ" ಕವಿಚರಿತ್ರೆಯಿಂದಲೇ ಸ್ಪಷ್ಟವಾಗುತ್ತೆ.

ಈ ಶಾಸನದಿಂದೆ 'ಕವೀಂದ್ರಾಭರಣ ಮಧುರ' ನಿಗೆ ದೇವರಾಯನ ಮಹಾಪ್ರಧಾನ ಲಕ್ಷ್ಮೀಧರನು 'ಸುಕ್ಷೇತ್ರ ಹಸ್ತ್ಯಶ್ವಭೂಷಾದಿಗಳಂ' ಕೊಟ್ಟು ಅವನನ್ನು ಬಹು ಅಕ್ಕರೆಯಿಂದೆ ಪೋಷಿಸುತ್ತಿದ್ದನೆಂದು ತಿಳಿಯಬರುತ್ತದೆ.

ಹರಿಹರರಾಯನ ಪ್ರಧಾನ ಮುದ್ದದಂಡೇಶನಿಂದ ಪೋಷಿತನಾದ ಕವಿಚರಿತ್ರೆಯ ಮಧುರನಿಗೂ, ದೇವರಾಯನ ಪ್ರಧಾನನಾದ ಲಕ್ಷ್ಮೀಧರನಿಂದ ಪೋಷಿತನಾದ ಈ ಶಾಸನದ ಮಧುರನಿಗೂ ಏನು ಸಂಬಂಧವುಂಟೆಂದು ವಾಚಕರು ಕೇಳಬಹುದು. ಈ ಶಾಸನಾಂತ್ಯದಲ್ಲಿ ಮಧುರನು ತನ್ನನ್ನು ಕುರಿತು ಹೀಗೆ ಬರೆದುಕೊಂಡಿರುವನು :—

ವೃ ॥ ಗಣಿದಂಗೊಳ್ವೆಡೆ ಮಿಕ್ಕಿನಕ್ಕರದಮಾತಂತಿಕ್ಕೆ ತನ್ನಾಣೆ ಘೋ
ಸಣೆ ಸಲ್ಗುಂ ಸುಕವೀಂದ್ರವೃಂದಸಭೆಯೊಳ್ತಾನೆಂದೊಡಂಮೆಂಮು ಧಾ ।
ರಿಣಿಯೊಳ್ಕೇಳ್ದಿಯೊರ್ಜಡಾ ಮಧುರನಂ ನಿರ್ನ್ನೀತಕರ್ನ್ನಾಟಲ
ಕ್ಷ್ಮಣಪಾದಸರೋಜನಂ ಪ್ರವಿಲಸದ್ಧಾತ್ರೀಮುಖಾಂಭೋಜನಂ ॥

ಕವಿಚರಿತ್ರೆಯ ಮಧುರನು ತನ್ನ ಕವಿತಾಚಾತುರಿಯನ್ನೂ ಗುಣಾದಿಗಳನ್ನೂ ಹೇಳಿಕೊಳ್ಳುತ್ತಾ ಹೀಗೆ ಬರೆದಿರುವನು :—

ವೃ ॥ ಗಣಿದಂಗೊಳ್ವೆಡೆ ಮಿಕ್ಕಿನಕ್ಕರದ ಮಾತಂತಿಕ್ಕೆ ತನ್ನಾಣೆ ಗೋ
ಸಣೆ ಸಲ್ಗುಂ ಸುಕವೀಂದ್ರವೃಂದಸಭೆಯೊಳ್ ತಾನೆಂದೊಡಮ್ಮನ್ನ ಧಾ ।
ರಿಣಿಯೊಳ್ ಕೇಳ್ದಿಯಾ ಜಡಾ ಮಧುರನಂ ನಿರ್ಣೀತಕರ್ಣಾಟಲ
ಕ್ಷಣಭಾಷಾಕವಿರಾಜನಂ ಪ್ರವಿಲಸದ್ವಾಣೀಮುಖಾಂಭೋಜನಂ ॥

ಈ ವೃತ್ತವನ್ನು ಕವಿಚರಿತ್ರೆಕಾರರು ಉದಹರಿಸಿರುವರು. ವಾಚಕರು ಈ ಎರಡು ವೃತ್ತಗಳನ್ನೂ ಕೊಂಚ ಪರೀಕ್ಷಿಸಿದ್ದೇ ಆದರೆ ಎರಡೂ ಒಂದೇ ಎಂಬುದಾಗಿ ಹೇಳದಿರರು. ವೃತ್ತಗಳ ನಾಲ್ಕನೇಪಾದ ಹೊರತು ಮಿಕ್ಕವುಗಳು ಎರಡರಲ್ಲೂ ಒಂದೇ. ನಾಲ್ಕನೆಯ ಪಾದವು ಕವಿಚರಿತ್ರೆಯಪ್ರಕಾರ :

" . . . . . . ನಿರ್ಣೀತಕರ್ಣಾಟಲ
ಕ್ಷಣಭಾಷಾಕವಿರಾಜನಂ ಪ್ರವಿಲಸದ್ವಾಣೀಮುಖಾಂಭೋಜನಂ " ॥ ಎಂಬುದು.

ಶಾಸನಪಾಠದಪ್ರಕಾರ :

" . . . . . . ನಿರ್ನ್ನೀತಕರ್ನ್ನಾಟಲ-

---

[1] Madras Epigraphical collection for 1889, No. 38.
[2] ಈ ಲಕ್ಷ್ಮೀಧರನು ತನ್ನ ತಾಯಿಯ ಕಡೆ ಅದ್ವೈತಾಚಾರ್ಯನಾದ ಮಾಧವಾಚಾರ್ಯನಿಗೆ ಬಂಧುವಾಗಿದ್ದನು.
[3] Vol. I, page, 346
[4] *Ibid.*, page, 347.

[1] ಕ್ಷ್ಮಣಪಾದಸರೋಜನಂ ಪ್ರವಿಲಸದ್ಧಾತ್ರೀಮುಖಾಂಭೋಜನಂ ॥”

ಆಗಿರುತ್ತದೆ.

ಮೊದಲನೇಪಾಠದಲ್ಲಿ ಮಧುರನು ತನ್ನ ಕವಿತಾಚಾತುರ್ಯವನ್ನು ಹೇಳುತ್ತಾ 'ಕರ್ಣಾಟಲಕ್ಷಣಭಾಷಾಕವಿರಾಜನಂ ಪ್ರವಿಲಸದ್ವಾಣೀಮುಖಾಂಭೋಜನಂ' ಎಂಬದಾಗಿ ಹೇಳಿಕೊಂಡಿರುವನು. ಎರಡನೆಯ ಪಾಠದಲ್ಲಿ ಅದೇ ರೀತಿ ತನ್ನಗುಣಾದಿಗಳನ್ನು ಕವಿತಾಚಾತುರ್ಯವನ್ನು ಹೇಳಿ ತನ್ನ ಪೋಷಕನು ಪ್ರಧಾನ ಲಕ್ಷ್ಮೀಧರನಾಗಿದ್ದುದರಿಂದ 'ಲಕ್ಷ್ಮಣಪಾದಸರೋಜನಂ ಪ್ರವಿಲಸದ್ಧಾತ್ರೀಮುಖಾಂಭೋಜನಂ' ಎಂಬದಾಗಿ ಹೇಳಿರುವನು. ಆದುದರಿಂದ 'ಕರ್ಣಾಟಲಕ್ಷಣಭಾಷಾಕವಿರಾಜನೂ' 'ನಿಸ್ಸೀಮಕರ್ಣಾಟಲಕ್ಷ್ಮಣಪಾದಸರೋಜನೂ' ಇಬ್ಬರೂ ಒಂದೇ. ಮಧುರನು ಮುದ್ದದಂಡೇಶನ ಪೋಷಣೆಗೆ ಸೇರಿದ್ದುದುಮಾತ್ರವೇ ಅಲ್ಲದೆ ಲಕ್ಷ್ಮೀಧರನ ಉದಾರಾಶ್ರಯಕ್ಕೂ ಪಾತ್ರನಾಗಿದ್ದನೆಂಬಂಶವು ಸ್ಪಷ್ಟವಾಯಿತು. 'ಭೂನಾಥಾಸ್ಥಾನಚೂಡಾಮಣಿ ಮಧುರಕವೀಂದ್ರಂ' ಎಂಬದಾಗಿ ಹೇಳಿಕೊಂಡಿರುವುದರಿಂದಲೂ, ಈ ಶಾಸನದಲ್ಲಿ ದೇವರಾಯನ ವಂಶಾವಳಿಯನ್ನು ಹೇಳುತ್ತಾ :

ವೃ ॥ ಆ ಭೂಮೀಪಾಲಪುಣ್ಯಾಂಕುರಮೆನೆ ಪುರುಷಾಕಾರದಿಂ ಪುಟ್ಟಿದಂತಾ
ಶಾಭಾಗಪ್ರಸ್ಫುರತ್ಪಾವನಯಶನಕಸಿಪ್ರೌಢಬಾಹುಪ್ರತಾಪಂ ।
ಸೌಭಾಗ್ಯಶ್ರೀನಿವಾಸಂ ಜನಿಯಿಸಿ ಸಕಲಕ್ಷತ್ರಚೂಡಾಧಿರೂಢಾ
ಜ್ಞಾಭಾರಂ ಸಾರ್ವಭೌಮೋನ್ನತಿಯೊಳೆಸೆಗಿದಂ ದೇವರಾಜಾವನೀಂದ್ರಂ ॥

ವೃ ॥ ಸಲಿನಾನಾಸಸ್ಯಸಂಪತ್ತಿಯನೊದವಿಸಿ ಸಂತುಷ್ಟಿಯಿಂ ದಾನಧಾರಾ
ಜಲದಿಂ ಸಂತಾಪಮಂ ತಳ್ಗಿಸಿ ವಿತತಸಿತಚ್ಛತ್ರಸುಚ್ಛಾಯೆಗೊಯ್ದು ॥
ಜ್ವಲಿಪಾಜ್ಞಾದಾಮದಿಂದಂ ನಿಯಮಿಸಿ ನಿಜದೋಸ್ತಂಭದೋಳ್ಕಟ್ಟಿ ಗೋಮಂ
ಡಲಮಂ ಸತ್ಕೀರ್ತಿದುಗ್ಧಂ ಗಱೆದನಱಕೆಯಿಂ ದೇವರಾಜಾವನೀಂದ್ರಂ ॥

ಎಂದನೇಕವಿಧವಾಗಿ ಸ್ತೋತ್ರಮಾಡಿರುವುದರಿಂದಲೂ, ಮಧುರನು ದೇವರಾಯನ ಆಸ್ಥಾನಕವಿಯಾಗಿಯೂ ಇದ್ದನೆಂದೇ ಹೇಳಬಹುದು. [2] ಈ ಕವಿಯ 'ಸಮಾಸಪ್ರಸದೇಶೀಸರಣಿ ಶಬ್ದಾರ್ಥೋರ್ಜಸಮಾಚಾತುರ್ಯ ಮಾಧುರ್ಯ'ದ ವಿಚಾರವಾಗಿ ನಾವಿಲ್ಲಿ ಹೇಳಲು ಪ್ರಯತ್ನಿಸುವುದು ಅನುಚಿತ.

ಮಧುರನ ಗ್ರಂಥಗಳು ನಮಗೆ ಹೆಚ್ಚಾಗಿದೊರೆತಿಲ್ಲ. ಈಶಾಸನವೇ ಒಂದು ಪುಟ್ಟ ಕೃತಿಯಂತಿದೆ. ಇದರಲ್ಲಿ ಕಾವ್ಯಲಕ್ಷಣಗಳೆಲ್ಲವೂ ಉಂಟು. ಲಕ್ಷ್ಮೀಧರನ ವಿಚಾರವನ್ನು ವಿಶದೀಕರಿಸುವಾಗ ಅಲ್ಲಲ್ಲಿ ಶಾಸನಭಾಗಗಳನ್ನೇ ಉದಹರಿಸುವೆನು. ಆಗ ಪಾಠಕರೇ "ಕವಿಮಧುರನ ಮಾತುಗಳೇಂ ಸವಿಯೋ" ಎಂದು ಹೇಳದಿರರು.

ಲಕ್ಷ್ಮೀಧರನು ದೇವರಾಯನ ಮಹಾಪ್ರಧಾನನಾಗಿದ್ದನೆಂಬುದನ್ನು ಮೊದಲೇ ತಿಳಿಸಿದ್ದಾಯಿತು. ಮಧುರನು ಇವನನ್ನು "ಸತ್ಕವೀಂದ್ರ" "ಕವಿತಾಕಲ್ಪವಲ್ಲೀವಿತಾನ" "ಕವಿರಾಜಲಕ್ಷ್ಮಣ" "ಕವಿತಾಲಕ್ಷ್ಮೀಧರ" ಎಂದು ಅನೇಕಬಗೆಯಾಗಿ ಸಂಬೋಧಿಸಿ ಸ್ತೋತ್ರಮಾಡಿರುವುದರಿಂದ ಲಕ್ಷ್ಮೀಧರನು ವಿದ್ಯಾಪಕ್ಷಪಾತಿಯಾಗಿದ್ದು ಅನೇಕ ವಿಬುಧರಿಗೆ ಆಶ್ರಯಭೂತನಾಗಿದ್ದುದು ಮಾತ್ರವೇ ಅಲ್ಲದೆ ತಾನೇ ಒಬ್ಬ ಮಹಾಕವಿಯಾಗಿದ್ದಿರಬೇಕು. ಇದಕ್ಕೆ ಸಂದೇಹವೇ ಇಲ್ಲ. ಆದರೆ ಇವನು ಯಾವ ಗ್ರಂಥಗಳನ್ನು ಬರೆದಿರುವನೋ ನಮಗೆ ಗೊತ್ತಿಲ್ಲ. ಕೆಳಗೆ ಉದಹರಿಸಲ್ಪಡುವ ಶಾಸನದಲ್ಲಿ ಕಂಡ 'ಸಾರಶ್ರೀನೀತಿವಾಕ್ಯಾಮೃತಪರಿಸರದೋಳ್ಪುಟ್ಟಿ' ಎಂಬ ವೃತ್ತದಲ್ಲಿ ಸೂಚಿತವಾಗಿರುವ 'ನೀತಿವಾಕ್ಯಾಮೃತ' 'ಆನಂದರಾಮಾಯಣ' 'ಕೃಷ್ಣಲೀಲಾ' ಮೊದಲಾದುವು ಲಕ್ಷ್ಮೀಧರಕೃತಗ್ರಂಥಗಳೆಂದು ಊಹಿಸಲು ಅವಕಾಶವುಂಟು.

ವಿಜಯನಗರದ ಅರಸರ ಬಳಿಯಲ್ಲಿ ಮಾದರಸಸಾಯಣರೆಂಬ ಪ್ರಧಾನರು ಇಬ್ಬರಿದ್ದರು. ಇವರೇ ಪ್ರಸಿದ್ಧರಾದ ವೇದಭಾಷ್ಯಾದಿಬೃಹದ್ಗ್ರಂಥಪ್ರವರ್ತಕರಾಗಿ ಹೆಸರುವಡೆದ ಸಾಯಣಮಾಧವರೆಂಬುವರು. ಇವರಿಗೆ ಸಿಂಗಲೆ ಎಂಬೊಬ್ಬ ತಂಗಿಯಿದ್ದಳು.

ವೃ॥ ಆತರುಣೀಶಿಖಾಮಣಿಗೆ ವಲ್ಲಭನಾದನೆ ವಿಷ್ಣುವೃದ್ಧವಿ
ಖ್ಯಾತಪವಿತ್ರಗೋತ್ರದೊಳು ಗೋಸನೆ ನೆತ್ತಗೆದಂ ಜಗಜ್ಜನ ।
ಪ್ರೀತಿಕರಂ ಗುಣಾಕರನಲಂಕೃತಭೂಭುವನಂ ಬುಧಾಳಿಲೀ
ಲಾತಿಶಯೈಕತಾಮರಸನೆಂದೆನೆ ರಾಮರಸಂ ಧರಿತ್ರಿಯೊಳ್ ॥

---

[1] [ಇಲ್ಲಿ 'ಕ್ಷ್ಮಣಪಾದಸರೋಜನಂ' ಎಂಬುದು ಛಂದಸ್ಸಿಗೆ ವಿರುದ್ಧವಾಗಿದೆ. ತಿದ್ದುವಲ್ಲಿ 'ಕ್ಷ್ಮಣಪಾದೈಕಸರೋಜನಂ' ಎಂದು ತಿದ್ದಬೇಕಾದೀತು.—ಹೊ. ಕೃ.]

[2] *Lives of Kannada Poets*, Vol. I, pages, 346–351 and Vol. II, page, 204.

ಈ ರಾಮರಸನಿಗೆ :

ವೃ॥ ಅನಿಮಿಷನಂದನಕ್ಕಮರಭೂರುಹಪಂಚಕಮೀಶ್ವರಂಗೆ ನೆ
ಟ್ಟನೆ ಮುಖಪಂಚಕಂ ನೃಪನಯಾಭಿಮತಕ್ಕಮದ್ದ್ವರ್ಗಪಂಚಕಂ ।
ಜನಿಯಿಸಿ ಲೋಕರೂಢಿ ವಡೆದಂತೆ ಸಮಸ್ತಜನಂ ಮನಂಗೊಳ
ಲ್ಜನಿಸಿದುದಾ ಗುಣೈಕನಿಧಿ ರಾಮರಸಂಗೆ ತನೂಜಪಂಚಕಂ ॥

ಕಂ॥ ಕ್ರಮದಿಂ ಲಕ್ಷ್ಮೀಧರ ಚೆನ್ನಮಂತ್ರಿ ಬುಕ್ಕಂಣ ಮಾಧವಂ ಪೆರ್ಗ್ಗಡೆಯಂ ।
ದಮರ್ದಿರೆ ನಾಮಂ ನೆಗಳ್ದರ್ ಸಮನಿಸಿ ಸಿಂಗಾಂಬಿಕಾಪವಿತ್ರೋದರದೊಳು ॥

ಕಂ॥ ಆ ಪಂಚಪೈವರೊಳಾಂತಂ ಶ್ರೀಮದ್ಭೀಮಪ್ರತಾಪನರ್ಜ್ಜುನಕೀರ್ತಿ ।
ಪ್ರೇಮಂ ಲಕ್ಷ್ಮೀಧರನೆನ[ಲೀ] ಮಹಿಯೊಳ್ಧರ್ಮ್ಮಸಂಭವಪ್ರಾಭವಮಂ ॥

ಕಂ॥ ಕಂನಡಿಗಕುಲಕೆ ರಂನದ ಕಂನಡಿಯೆನೆ ವಿಶ್ವವಿದಿತವೃತ್ತಶ್ರೀಸಂ ।
ಪಂನಂ ಲಕ್ಷ್ಮೀಧರದೇವಂ ನಿರ್ಮ್ಮಲನಾಗಿ ನೆಗಳ್ದನೊಳಗಂ ಪೊರಗಂ ॥

ವೃ॥ ಶ್ರೀರಾಮಂ ತಂದೆ ದೇವೋತ್ತಮ ದಶರಥರಾಮಂ ಮನೋದೈವಮಾನಂ
ದಾರಾಮಂ ರೂಢಿವೆತ್ತಗ್ಗದ ಕುಲಗುರುವೆಂದಂತೆ ಪೋಷಿಪ್ಪದೇಸಿಂ ।
ನಾಗಂ ಸಿಂಗಾಂಬಿಕಾಮಂಗಳಜಠರಸುಧಾವಾರ್ಧಿಸಂಜಾತನಂ ತಾ
ನಾರಾಮಂ ಲಕ್ಷ್ಮಣಾಮಾತ್ಯನೆ ಸಕಲಜಗಜ್ಜಾತಚೇತೋಭಿರಾಮಂ ॥

ಸಿಂಗಾಂಬಿಕೆಯು ತನ್ನ ಮಗುವಿಗೆ ಹೇಗೆ ಹಾಲೆಣೆಯುತ್ತಿದ್ದಳೆಂಬುದನ್ನು ಮಧುರನಿಂದ ಕೇಳಿ:

ವೃ॥ ಕೆಱೆಯಂ ಕಟ್ಟಿಸು ಭಾವಿಯಂ ಸವೆಸು ದೇವಾಗಾರಮಂ ಮಾಡಿಸ
ಜ್ಜೆಱೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ ।
ರ್ಗ್ಗಱೆವಿಟ್ಟಾಗಿರು ಶಿಷ್ಟರಂ ಪೊರೆ ಯೆನುತ್ತಿಂತೆಲ್ಲಮಂ ಪಿಂದೆ ತಾಂ
ಯೆಱೆದಳ್ಪಾಲೆಱೆವಂದು ಕೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನ ॥

ಲಕ್ಷ್ಮೀಧರನಿಗೆ ದೇವಕಿ, ಸೋಮಲೆ ಎಂಬಿಬ್ಬರು ಹೆಂಡಿರಿದ್ದರು. ಗಂಡು ಮಕ್ಕಳು ನಾಲ್ಕುಮಂದಿ. ಈ ಲಕ್ಷ್ಮೀಧರನ ಕೀರ್ತಿಯನ್ನು ವರ್ಣಿಸುತ್ತಾ ಕವಿಯು ಹೀಗೆ ಹೇಳಿಯಿದ್ದಾನೆ:

ಕಂ॥ ಕಯ್ಯೆಂದೊಡೆ ಮಂದಾರದ ಕಯ್ಯುಂ ಮಂತ್ರೀಂದ್ರ ಲಕ್ಷ್ಮಣಾಂಕನ ಕಯ್ಯುಂ ।
ಕಯ್ಯಲ್ಲದುಳಿದ ಮನುಜರ ಕಯ್ಯೆಂಬುವು ಮರುಳ ಕೈಗಳೇತಱ ಕೈಗಳ್ ॥

ಕಂ॥ ಮಾತೇನೊ ದೇವರಾಯಂಗಾತಂ ಸನ್ಮಂತ್ರಿಯೆನಿಸಿ ನೆಗಳ್ವರೆ ವಿಬುಧ ।
ಪ್ರೀತಿ ಮಿಗೆ ನಿಖಿಳವಿದ್ಯಾನೀತಿಗೆ ಗುರುವೆಂನದಿರ್ಪರೇ ಲಕ್ಷ್ಮಣನಂ ॥

ವೃ॥ ಸುಮನೋವಿನ್ಯಾಸದಿಂ ವಿಶ್ರುತನಿಬುಧಜನಾನೂನಸನ್ಮಾನದಾನ
ಕ್ರಮದಿಂದೀ ರಾಮದಂಡಾಧಿಪತ್ಮಜ ಸಚಿವಶಿರೋರತ್ನ ಲಕ್ಷ್ಮೀಧರಂಗಾ ।
ಸಮಱೆಂದಾನಳ್ಕಱಿಂ ಕೇಳೊಡೆ ಬಿಡು ಪೊಸತೇಂ ಪೋಗಿಯುಂ ಬಂದು ಕಲ್ಪ
ದ್ರುಮಮೊಂದಂ ಪೇಳ್ವ ಮತ್ತುಳ್ಳಡೆ ನುಡಿ ಜಗತೀಚಕ್ರದೊಳ್ ಸತ್ಕವೀಂದ್ರಾ ॥

ವೃ॥ ಪೊಸದಾನರ್ಜ್ಜಿತಸುವರ್ಣವೇಂ ಮುನಿದಕಯ್ಯೊಳ್ಪೇಳಲೇ ಪೆಂಪಿ ವಾ
ದಿಸದಿರ್ವಂಶವಿಶುದ್ಧಿಯೊಳ್ವಿಭವದೊಳ್ವಿಖ್ಯಾತಿಯೊಳ್ನೀತಿಯೊ ।
ಳ್ಜಸದೊಳ್ಸಜ್ಜನಿಕೆಯೊಳತ್ಯುದಾರಗುಣದೊಳ್ಗಾಂಭೀರ್ಯದೊಳ್ಕೀರ್ತ್ತಿ ಲ
ಕ್ಷ್ಮಿಸ ಲಕ್ಷ್ಮೀಧರನಲ್ಲದುಂಟೆ ಸಭೆಯೊಳ್ ಶ್ರೀದೇವರಾಜೇಂದ್ರನಾ ॥

ವೃ॥ ಧರಣೀಚಕ್ರಂ ಮನಂಗೊಳ್ಪುದಱುಮುರುತಮಸ್ತೋಮವಳ್ಳಾಡುವಾತ್ಮಾ
ಚರಣಂ ಸನ್ಮಾರ್ಗ್ಗಮುದ್ಯೋತಿಸುವ ರುಚಿಸದಾಲೋಕಮುರ್ವ್ವೀಳ್ವ ತೇಜ ।
ಸ್ಫುರಣಂ ನಿತ್ಯಾನುರಾಗಕ್ಕೆಡೆಗುಡಲೆಸೆವೀ ಪೆಂಪರ್ಮ್ಮಯಿಂ ದೇವಭೂಭೃ
ದ್ವರಪಾದಾಸಂನ ನೇನುಂನತಿವಡೆದನೊ ಲಕ್ಷ್ಮೀಧರಾಮಾತ್ಯಮಿತ್ರಂ ॥

ವೃ॥ ಪೂವಿನ ಬಿಲ್ಲನೇಱಿಸುವ ಬಂಡೆ ಬಸಂತನನಾಸೆಮಾಡುಪಿಂ
ನೋವಿನರಲ್ಗಳಿಂ ಬನಸಗೆಯ್ವಳದಿಂಗಳ ಪಂಗುಗೊಳ್ವ ಬ।
ಳ್ಪೇವ್ರದೆನುತ್ತ ಚಿತ್ತಭವನಾವನ ಮೆಯ್ವಳಗೊಂಡು ಕಂಡ ಕಾಂ
ತಾವಳಿಯಿಂ ನುರಳ್ಚುವನೆನಲೆಸ್ಪಬಗಂತುಟೊ ಲಕ್ಷ್ಮಣಾಂಕನಾ ॥

ಕಂ॥ ನೆಲದೊಳ್ಪ್ರತಿರಿಂಗರಾವೆಂದುಲಿವರ ನಾಲಿಗೆಯನಲುಗಲಿಯ್ಯದೆ ಬಲು ಸಂ।
ಕಲೆಯಾಡುದು ಮುಂಕೀರ್ತಿಯ ಕಲೆ ಮೊಜಾಗವಱಿಯ ಮಂತ್ರಿಲಕ್ಷ್ಮೀಧರನಾ ॥

ವೃ॥ ಗಣನಾಮಾತ್ರಮೆ ದೇವರಾಯನರನಾಥಾಸ್ಥಾನದೊಳ್ಮಾನವಾ
ಗ್ರಣಿಗಳ್ಸ್ವೃತಿ ವಿಚಾರಿಪಾಗಳುಪಧಾಸಂಶುದ್ಧಿಯಿಂ ಬುದ್ಧಿಯಿಂ।
ಗುಣದಿಂ ಗೌರವದಿಂ [ಪೊ]ದಳ್ದಸೆವ ಮುದ್ರಾಮಾತ್ಯಯೋಗಂಧರಾ
ಯಣಚಾಣಾಕ್ಯಸುಮಂತ್ರರೋಳ್ದೊರೆಗೆ ವಂದಂ ಮಂತ್ರಿಲಕ್ಷ್ಮೀಧರಂ ॥

ವೃ॥ ಸಾರಶ್ರೀನೀತಿವಾಕ್ಯಾಮೃತಪರಿಸರದೊಳ್ಪುಟ್ಟಿ ಮಿಯ್ಯುಂಡದಾನಂ
ದಾರಾಮಾಸಂನರಾಮಾಯಣದೊಳಮೆರ್ದು ತಳ್ತಾವಗಂ ಕೃಷ್ಣಲೀಲಾ।
ಧಾರಂ ತಾನಾಗಿ ನಾನಾಫಲಮನಿಳಗೆ ಬೀಱಿತ್ತು ಸಂಸಾರಸಾಮ್ರಾ
ಕಾರಂ ಸನ್ಮಂತ್ರಿ ಲಕ್ಷ್ಮೀಧರನುರುಕವಿತಾಕಲ್ಪವಲ್ಲೀವಿತಾನಂ ॥

ವೃ॥ ಪದಪಿಂದಂ ಕವಿರಾಜಲಕ್ಷ್ಮಣನ ಕಾವ್ಯಾಲಾಪಮಂ ಕೂರ್ತು ಕೇ
ಳದೆ ಮುಂಪೋದರೆ ಪಾದ ಪೂ[ಂ]ಮೆ ಕಿವಿಗೊಟ್ಟತ್ತಾನುಮಾರ್ದುದು ಸಂ।
ಮದದಿಂ ಸೈತಿರವೋರು ದೂತಿಯರಮಾತಂ ವಿಸಾಟಿ ಕಣ್ಗೊಂಡು ನೋ
ಡಿದ ಪೆಣ್ಗಳ್ಪದಿವಿದ್ದ ಪೂಗಣೆಯ ಪುಂಕಂದಂಣಿ ಪುಯ್ಯಲ್ಗರೇ ॥

ವೃ॥ ಗುರುದೈವಂ ಮೆಚ್ಚೆ ನಿಚ್ಚಂ ಬಗೆದಣಿವ ಮನೋಭಕ್ತಿ ವಿದ್ವಜ್ಜನಂ ಬಾ
ಪುರೆ ಬಾಪೆಂದೆತ್ತಿ ಕೊಂಡಾಡುವ ವಿವಿಧಕಳಾಪ್ರೌಢಿ ವಂದಿವ್ರಜಂ ಕಂ।
ಡಿರದಿಷ್ಟಾರ್ಥಂಗಳಂ ಕೊಂಡದಱ ಪೊಗಳ್ವ ವಿಶ್ರಾಣನಂ ವಿಶ್ವ[ವಂದ್ಯಂ]
ಚರಿತಂ ತಾನಾಗಲೇನುನ್ನತಿವಡೆದನೊ ಲಕ್ಷ್ಮೀಧರಾಮಾತ್ಯವರ್ಯಂ ॥

ಲಕ್ಷ್ಮೀಧರನ ಸ್ವಾಮಿಕಾರ್ಯ ದುರಂಧರತೆಯನ್ನು ಕುರಿತು ಮಧುರನು ಒಂದು ಉದಾಹರಣೆಯನ್ನ ಕೊಟ್ಟಿರು ವನು. ಒಮ್ಮೆ ಕೆಲವರು ಘಾತುಕರು ದೇವರಾಯ ಮಹಾರಾಯನನ್ನು ಕೊಲ್ಲಬೇಕೆಂದು ನಿಶ್ಚಯಿಸಿ ಚನ್ನಾಗಿಮಸೆದ ಆಯುಧಗಳನ್ನು ಕೈಲಿಹಿಡಿದು ರಾಜದ್ವಾರವನ್ನು ಮುತ್ತಿದರು. ಈ ಸಂಚನ್ನು ಲಕ್ಷ್ಮೀಧರನು ತಿಳಿದು ಶತ್ರುಬಲ ವನ್ನು ಲೆಕ್ಕಿಸದೆ "ತನ್ನ ಪತಿಕಾರ್ಯ್ಯಮೆ ಕಾರ್ಯ್ಯಮೆನುತ್ತ" ಮಹಾಸಾಹಸದಿಂದ ವಂಚಕರನ್ನು ವಂಚಿಸಿ ತನ್ನೊ ಡೆಯನ ಪ್ರಾಣವನ್ನು ಕಾಪಾಡಿದನಂತೆ.

ಲಕ್ಷ್ಮೀಧರನ ವಿಷಯವಾದೀ ಕಡೆನುಡಿಗಳನ್ನು ಮಧುರನ ಸವಿನುಡಿಗಳಿಂದಲೇ ಮುಗಿಸುವೆನು.

ವೃ॥ ಪೊಗಳಲೊಪ್ಪಂಬುಳಿಯೋದೆ ಪೆಂಪಿನ ಯಶೋಲಕ್ಷ್ಮೀಧರಂ ಬಲ್ಲವ
ಬ್ಬೆಗೆಗೊಳ್ಪಂಪಿನ ಸೊಂಪುವೆತ್ತ ಕವಿತಾಲಕ್ಷ್ಮೀಧರಂ ರಾಜಸ್ರೀ।
ತಿಗೆ ನೇಪಥ್ಯದ ಮಹಾಪ್ರಧಾನಪದವೀಲಕ್ಷ್ಮೀಧರಂ ಧಾತ್ರಿಯೊಳ್
ನೆಗಳ್ದಂ ನಿರ್ಮ್ಮಲರಾಮಚಂದ್ರತನಯಂ ಸನ್ಮಂತ್ರಿಲಕ್ಷ್ಮೀಧರಂ ॥

---

## ಪರಿಶಿಷ್ಟ I.

### ಕನ್ನಡ ನಾಟಕ

ಕರ್ಣಪಾರ್ಯನ (ಕ್ರಿ.ಶ. ೧೧೪೦) 'ಚೇತೋಹರಮೆಂಬಿನಮೆಸೆವ ಮಾಳವೀಮಾಧವ,' ಕೇಶಿರಾಜನ (ಕ್ರಿ.ಶ. ೧೨೬೦) 'ಶ್ರೀಚಿತ್ರಮಾಲೆಯಂತೆ ಸುಭದ್ರಾಹರಣಂ, ಪ್ರಬೋಧಚಂದ್ರಂ' ಇವೆಲ್ಲವೂ ನಾಟಕಗಳಾಗಿರಬೇಕೆಂದು ಕವಿಚರಿತ್ರಕಾರರು ಬರೆದಿರುವರು.[1] ಕಾರಣಗಳಿಲ್ಲದೆ ಕವಿಚರಿತ್ರಕಾರರು ಹೀಗೆ ಊಹಿಸಲಾರರು. ಆದರೆ ಅವ ರು ಯಾವ ಕಾರಣಗಳನ್ನೂ ಸೂಚಿಸಿರುವುದಿಲ್ಲ.

---

[1] *Lives of Kannada Poets*, Vol. I, ಅವತರಣಿಕೆ, page 10.

ರನ್ನನ (ಕ್ರಿ.ಶ. ೯೯೩) ಗದಾಯುದ್ಧದಲ್ಲಿನ 'ಅಱುತ್ತುಂಬಂದ ತನ್ನಂ (ಪಾಂಚಾಲಿ) ನಗುತ್ತುಂ ಪ್ರೋಸಂತೆ ಸಂಕ್ಷೋಭಮಂ ಮಾಡಿಸಿದ' ವಿದೂಷಕನನ್ನೂ[1], 'ಪ್ರಸ್ತಾವ' 'ಕಂಚುಕಿ' ಎಂಬ ಹಲವು ಶಬ್ದಗಳನ್ನೂ[2], ನಾಗಚಂದ್ರನ (ಕ್ರಿ.ಶ. ೧೧೦೫) ರಾಮಚಂದ್ರಪುರಾಣದ

'ಶ್ರೀಕೇಳೀನಿಲಯಂ ನಿಜಾಂಘ್ರಿಕಮಲಂ ವಿದ್ಯಾನಟೀನಾಟ್ಯವೇ
ದೀಕಲ್ಪಂ ಮುಖಚಂದ್ರಬಿಂಬಮಖಿಲೇಂದ್ರೋತ್ತಂಸಮಾಣಿಕ್ಯದೀ।
ಪಾಕೀರ್ಣಂ ಹರಿಪೀಠಪಾರ್ಶ್ವಮೆನಿಪಂ ಪೂಜಾರ್ಹನಾರ್ಹಂತ್ಯಲ
ಕ್ಷ್ಮೀಕಾಂತಂ ಮುನಿಸುವ್ರತಂ ನಮಗೆ ಮೋಕ್ಷೈಕಾರ್ಥಸಂಸಿದ್ಧಿಯಂ ॥'

ಎಂಬ ಶ್ಲೋಕವನ್ನೂ, ರುದ್ರಭಟ್ಟನ (ಕ್ರಿ.ಶ. ೧೧೮೦) ಜಗನ್ನಾಥವಿಜಯದ

'ಶ್ರೀರಾಮಾನಟಿ ಕೌಸ್ತುಭದ್ಯುತಿಕಿರತ್ಪುಷ್ಪಾಂಜಲಿಕ್ಷೇಪವ
ಕ್ಷೋರಂಗಸ್ಥಿತೆಯಾದ ಪಾದನಖರೋಚಿರ್ಗಂಗೆ ಪೃಥ್ವೀಶಕೋ।
ಟೀರವ್ಯಾಪ್ತಿಗೆ ಸಂದ ಚಕ್ರರವಿದೈತ್ಯಧ್ವಾಂತಮಂ ಗೆಲ್ದ ಭೂ
ಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹಮಂ ॥'

ಎಂಬ ಆದಿ ಶ್ಲೋಕವನ್ನೂ, ಕವಿಕಾಮದೇವನ (ಕ್ರಿ.ಶ. ೧೨೦೦) ಶೃಂಗಾರರತ್ನಾಕರದ ಮೂರನೆಯ ಪರಿಚ್ಛೇದದಲ್ಲಿನ

'ಕಂ॥ ನವರಸಭೇದಮಂ ಭಾವವಿಧಾನಮನಱಿಯ ಪೇಳ್ದೆ ನಿಲ್ಲಿಂದಿತ್ತಲ್।
ಕವಿಮುಖ್ಯರರಿಗೆ ನಾಯಕ ವಿವರಣೆಯಂ ನಾಯಿಕಾವಿಕಲ್ಪಾಂತರಮಂ ॥

ಚತುರ್ಥಪರಿಚ್ಛೇದದಲ್ಲಿನ

'ಕಂ॥ ನೆಱೆಯ ರಸಭಾವವಿಧಿಯಂ ನೆಱೆನಾಯಕನಾಯಿಕಾಪರೀಕ್ಷೆಯನಿಂಬಾ।
ಗಱಿಪಿದೆ ನಿತ್ತಲ್ ತಱಿಸಂದಱಿಪಿದಪೆಂ ಸುರಸಯ್ಯವಿಕಲ್ಪಾಂತರವಂ ॥

ಎಂಬ ಪದ್ಯಗಳನ್ನೂ, ಮಲ್ಲಿಕಾರ್ಜುನನ (ಕ್ರಿ.ಶ. ೧೨೪೫) ಸೂಕ್ತಿಸುಧಾರ್ಣವದೊಳಗಿನ

"ಬರೆಯಲ್ಬಾರದು ಬರ್ಣಿಸಲ್ಕರಿದು ನೋಡಲ್ಕೂಡದೊಡ್ಡೈಸಲ
ಚ್ಚರಿ ಭೂಮಂಡಲಮಧ್ಯದಿಂದೊಡೆದು ಮೂಡಿತ್ತೆಂಬಿನಂ ಚೆಲ್ವನಾ।
ಕೆರುವಾಡಂ ನವಭೂಮಿಕಾಪ್ರಕಟಿತಂ ವಿಷ್ಕಂಭವಿಸ್ತಾರಬಂ
ಧುರಸಂಧಿಪ್ರತಿಭಾಸಿ ನಾಟಕದ ಪಾಂಗಿಂ ಚೋಳಿಕಂ ಲಾಳಿಕಂ ॥"

ಎಂಬ ವೃತ್ತವನ್ನೂ, ಭೀಮಕವಿಯ (ಕ್ರಿ.ಶ. ೧೩೬೯) ಬಸವಪುರಾಣದ

'ಸಕಲಭಕ್ತಾಸ್ಥಾನದೋಳ್ಕೇಳಿಕೆಗಳೊಗ್ಗಿನ ಮೇಳವದ ನಾ
ಟಕದ ಪಾತ್ರದ ಪೇರಣೆಯ ಜೋಳಗರ ಜೋಕೆಗಳ।
ಪ್ರಕಟವಿಸಯಲ್ವೀಣಾವೀಣಾನಿಕರನಾಪವೆಸ್ಮರೆಯ ಶೋಭಾ
ಷ್ಟಕ ಪ್ರೊದರುತಿರೆ ಚಾಂಗು ಭಲರೆಂಬಾರವಂಗಳೊಳು ॥'

ಎಂಬ ಪದ್ಯವನ್ನೂ[3], ನಿಜಗುಣ ಶಿವಯೋಗಿಯ (ಕ್ರಿ.ಶ. ೧೫೦೦) ವಿವೇಕಚಿಂತಾಮಣಿಯ ನಾಲ್ಕನೆಯ ಪ್ರಕರಣದಲ್ಲಿನ

"ಬಳಿಕ ನಾಟಕದಲ್ಲಿ ದಿನದಿನಕಭಿನಯಿಸಲ್ಪಡುತ್ತಿರ್ಪ, ರಸ ಭಾವ ಸಂವಿಧಾನ ಆಶ್ರಯಂಗಳೆಂಬ ಚತುರ್ವಿಧ ಪ್ರಬಂಧಾಂಶಂಗಳಂ, ಮುಖದೃಷ್ಟಿ ಹಸ್ತ ಪಾದಂಗಳಭಿನಯಿಂಪ ಲಕ್ಷಣಂ ತಪ್ಪದೆ, ಮೇಲೆ ಮುಖರಸವೇ ಹಾವ, ನೇತ್ರಸ್ಪಂದವೇ ಭಾವ, ಪದನ್ಯಾಸವೇ ವಿಲಾಸ, ಭ್ರೂವಿಕ್ಷೇಪಣವೇ ವಿಭ್ರಮವೆಂಬ ಚತುರ್ವಿಧವಿನೋದನಮಂ ವ್ಯವಹರಿತು, ಶುದ್ಧ ದೇಶಿಯವೆಂಬ ದ್ವಯಮಾ ವಿವರಗಳಿಂದು, ತಾಂಡವ ನಾಟ್ಯ ನೃತ್ತ ಲಾಸ್ಯ ಗುಂಡಿಲ ಪೆಕ್ಕಣ ಲಚ್ಚಣ ಅಪರಿಪಾತ್ರ

[1] ಗದಾಯುದ್ಧ, ದ್ವಿತೀಯಾಶ್ವಾಸ, ಪ್ರುಟ 23-24.

[2] ಗದಾಯುದ್ಧ, ಪ್ರಥಮಾಶ್ವಾಸ, ಪ್ರುಟ 13.

[3] ಬಸವಪುರಾಣ, ಸಂಧಿ 4, ಪದ್ಯ 7.

ಸುಪಾತ್ರ ಸರ್ವತೋಭದ್ರವೆಂಬ ದಶವಿಧಪಾತ್ರಂಗಳಂ ಬೀರಿ, ಲಯಗಾನಾಭಿನಯರಸಾಲಂಕಾರಭಾವಶೋಭಾಸ್ಯವಂ ತೋರಿ, ಶ್ರುತಿನಯನಹೃದಯಾಕರ್ಷಣವಂಗೈವ ನರ್ತಕನರ್ತಕಿಯರಿಂದುಪಾಸಿತರಾಗಿ, - - - -" ಎಂಬ ಭಾಗವನ್ನೂ,

ವಾಚಕರು ಕೊಂಚ ಗಮನಿಸಿ ಓದಿದ್ದೇ ಆದರೆ ಕನ್ನಡಸಾಹಿತ್ಯಕ್ಕೆ ನಾಟಕವೂ, ಕನ್ನಡಿಗರಿಗೆ ರಂಗಭೂಮಿಯೂ ಹೊಸದಲ್ಲವೆಂದು ತೋರಿಬರದೆ ಇರದು.

ಭಟ್ಟಾಕಳಂಕನು (ಕ್ರಿ.ಶ. ೧೬೦೪) ತನ್ನ ಶಬ್ದಾನುಶಾಸನದಲ್ಲಿ 'ಶಬ್ದಾಗಮಯುಕ್ತ್ಯಾಗಮಪರಮಾಗಮ ವಿಷಯಾಣಾಂ ತಥಾ ಕಾವ್ಯನಾಟಕಾಲಂಕಾರಕಲಾಶಾಸ್ತ್ರವಿಷಯಾಣಾಂ ಚ ಬಹೂನಾಂ ಗ್ರಂಥಾನಾಮಪಿ ಭಾಷಾಕೃತಾನಾಮುಪಲಭ್ಯಮಾನತ್ವಾತ್' ಎಂದು ತನ್ನ ಕಾಲದಲ್ಲಿ ಕನ್ನಡದಲ್ಲಿ ನಾಟಕಗಳಿದ್ದುವೆಂದು ಹೇಳಿರುವನು. ಆದರೆ ಆ ನಾಟಕಗಳಲ್ಲಿ ಒಂದಾದರೂ ನಮಗೆ ಸಿಕ್ಕಿಲ್ಲ. ೧೭ ನೇ ಶತಮಾನದ ಸಿಂಗರಾರ್ಯಕೃತ ಸಂಸ್ಕೃತರತ್ನಾವಳಿಗೆ ಭಾಷಾಂತರವಾದ ಮಿತ್ರವಿಂದಾಗೋವಿಂದವೆಂಬ ನಾಟಕವೊಂದೇ ಈಗ ನಮಗೆ ದೊರೆತಿರುವುದು. ಅಲ್ಲದೆ ಕವಿಚರಿತ್ರೆಕಾರರು ಪ್ರಥಮಸಂಪುಟದ ಅನುಬಂಧದ 13 ನೇ ಪುಟದಲ್ಲಿ 'ಪ್ರಭಾವತೀನಾಟಕ' (ಕ್ರಿ.ಶ. 17 ನೇ ಶತಮಾನ) ವೊಂದನ್ನು ಗುರುತಿಸಿರುವರು.

ಕೆಳದಿಯರಸರು ಅರಮನೆಯಲ್ಲಿ ನಾಟ್ಯರಂಗವನ್ನು ಕಟ್ಟಿಸಿ ಅಲ್ಲಿ ಅನೇಕ ನಾಟಕಗಳನ್ನು ಆಡಿಸುತ್ತಿದ್ದರೆಂದು 'ಕೆಳದಿನೃಪವಿಜಯ' ದಿಂದ ತಿಳಿದುಬರುತ್ತದೆ (ಆಶ್ವಾಸ 5, ಪುಟ 76, ಪದ್ಯ 30).

ಭಟ್ಟಾಕಳಂಕನ ಹೇಳಿಕೆಯನ್ನು ಸ್ಥಿರಪಡಿಸಲು ಶಾಸನದ ಆಧಾರವೊಂದು ದೊರೆತಿರುವುದು. ಕನಕಗಿರಿ ತಾಲೂಕು ಚರುವುಬೆಳಗಲ್ಲೆಂಬ ಗ್ರಾಮದಲ್ಲಿರುವ ಕೇಶವದೇವಾಲಯದ ಒಂದು ಕಂಭದಮೇಲೆ ವೀರಕೃಷ್ಣರಾಯ ಮಹಾರಾಯನ (ಶಕ. ೧೪೩೬ ಭಾವ, ವೈಶಾಖ ಶು. ೧೫) ಶಾಸನವೊಂದುಂಟು[1]. ಇದರಲ್ಲಿ ತಿರುಪತ್ತೂರು ಸೋಮರಸನ ಮಗ ಕರಣಂ ಬಸವರಸನು ಪಾತ್ರಿ ಪ್ರೋತವರದ ನೆಟ್ಟುವ ತಿಂಮಯನ ಮಗಳಿಗೂ, ತಾಯಿಕೊಂಡನಾಟಕದ ಚೇಗಯನ ಮಗ ನಟ್ಟುವ ನಾಗಯ್ಯನಿಗೂ ಭೂಮಿಯನ್ನು ದಾನಮಾಡಿದಂತೆ ಬರೆದಿದೆ.

ಆದಕಾರಣ ೧೬ ನೇ ಶತಮಾನದಲ್ಲೇ ಕನ್ನಡ ನಾಟಕಗಳಿದ್ದುವೆಂದೂ, ಅವುಗಳನ್ನು ಆಗಾಗ್ಗ ರಂಗಸ್ಥಲದಲ್ಲಿ ಪ್ರದರ್ಶಿಸುತ್ತಿದ್ದರೆಂದೂ, ವೇಶ್ಯೆಯರು ಪಾತ್ರಗಳನ್ನು ಧರಿಸುತ್ತಿದ್ದರೆಂದೂ, ನಾಟಕಕಲೆಗೂ ನಟರಿಗೂ ಪ್ರೋತ್ಸಾಹ ವಿತ್ತೆಂದೂ ವಿಶದವಾಗುತ್ತದೆ.

## ಪರಿಶಿಷ್ಟ II

### 'ರಚಿಸು' ಎಂಬುದಕ್ಕೆ ಪರ್ಯಾಯ ಪದಗಳು

ಅನೇಕ ಶಿಲಾಶಾಸನಗಳ ಅಂತ್ಯದಲ್ಲಿ 'ಪೇಳ್ದ ನಟುತ್ತಿಯಂ ಸಾಸನಮಂ (Ep. Carn., Mysore, Pt. II, ನಾಗಮಂಗಲ 28) 'ರಾಚಯ್ಯಂ ಬರೆದಂ' (Ep. Ind., Vol. XV, p. 332) 'ಶ್ರೀಮತ್ಕವಿರಾಜವಲ್ಲಭಂ ಕಪ್ಪಣಭಟ್ಟರ ಲಿಖಿತಂ' (Ep. Carn., Shimoga, Pt. II, ಸೊರಬ 184) (Lives of Kannada Poets, Vol. I, p. 361). 'ಬರೆದಂ ರವಿನಾಗಭಟ್ಟ ನತ್ಯಾದರದಿಂ' (Ind. Ant., Vol. XII, p. 223) ಎಂದು ಅನೇಕಬಗೆಯಾಗಿ ಕಾಣಬರುತ್ತದೆ. ಹಲವು ವಿದ್ವಾಂಸರು 'ಬರೆದ' 'ಬರೆದಂ' 'ಲಿಖಿತ' ಮೊದಲಾದ ಶಬ್ದಗಳಿಗೆ 'ರಚಿಸಿದಂ' ಎಂಬ ಅರ್ಥವನ್ನು ಕೊಡಲು ಒಪ್ಪುವದಿಲ್ಲ. ಅದಕ್ಕೆ ಬದಲಾಗಿ 'ಕೈಬರಹದಿಂದ ಬರೆದರು' ಎಂಬದಾಗಿ ಅರ್ಥವನ್ನು ಕೊಡುವರು. 'ಬರೆ' 'ಪೇಳ್' ಎಂಬ ಶಬ್ದಗಳಿಗೆ 'ರಚಿಸು' ಎಂಬ ಅರ್ಥವಲ್ಲದೆ ಬೇರೆ ಅರ್ಥವಿಲ್ಲವೆಂದು ನಾವು ಹೇಳುವುದಿಲ್ಲ. ಸಾಧಾರಣವಾದ ಅರ್ಥದಲ್ಲಿ ಬರೆಯುವುದೆಂದರೆ ಕೈಬರವಣಿಗೆ ಯೆಂದು ಅರ್ಥ. ಪೇಳೆಂದರೂ ಹೇಳೆಂದು ಸಾಧಾರಣವಾದ ಅರ್ಥ. ಆದರೆ 'ಬರೆ' 'ಪೇಳ್' ಎಂಬ ಧಾತುಗಳ ಪರಿಶುದ್ಧಾರ್ಥವು 'ರಚಿಸು' ಎಂದೇ. ಇದಕ್ಕೆ ಆಕ್ಷೇಪಯೇ ಇಲ್ಲ. ಯಾಕೆಂದರೆ

'ಸುಕರಕವಿಯಪ್ಪಚರಾಜನುಂ ಸಹಜಕವಿ ಮಲ್ಲಿದೇವನುಂ ಬರೆದರು' (Ep. Ind., Vol. V, p. 231, foot-note 1) 'ಕವಿರಾಜಬಾಂಧವಂ ಬರೆದನಿದಂ' (Ep. Carn., Mysore, Pt. II, ಹೆಗ್ಗಡದೇವನಕೋಟೆ, 18) 'ಕವಿತಾಮನೋಹರಂ ಕವಿತಳರ ಕರ್ಪರಸಂ ಬರೆದಂ' (Ind. Ant., Vol. XIII, p. 93) 'ಕವಿ ಮಾದಿರಾಜ[ಂ] ಬರೆದಂ[2]' 'ಶಾಸನಮನಿದಂ ಬರೆದನಾಶುಕವಿ ನಿಟಿಲಾಕ್ಷಂ' (Ep. Carn., Vol. VII, ಶಿಕಾರಿಪುರ, 98).

---

[1] Madras Epigraphical collection for 1915, No. 558.

[2] *Lives of Kannada Poets*, Vol. I, p. 278.

‘ ಲಕ್ಷ್ಮೀಧರಸೇಚಿಮಂಗಾಚಂದ್ರಾರ್ಕ್ಕಮೊದವಿದಾಯುಂ ಶ್ರೀಯುಂ ಸಂಗತಿವಡೆದಿರೆ ಬರೆದಂ ಮಂಗಳಮಂ’ (S.I.I. Texts, Vol. IV, No. 38 of 1889) ಎಂಬ ಅನೇಕ ಪ್ರಯೋಗಗಳು ಕಾಣಬರುತ್ತವೆ. ಈ ಆರು ಉದಾಹರಣೆಗಳಲ್ಲೂ ‘ ಬರೆದ ’ ಎಂಬ ಕ್ರಿಯಾ ಪದಕ್ಕೆ ಅರ್ಥವೇನು ? ಸುಕರಕವಿ, ಸಹಜಕವಿ, ಕವಿರಾಜಬಾಂಧವ, ಕವಿತಾಮನೋಹರ, ಆಶುಕವಿ, ಎಂಬದಾಗಿ ‘ ಬರೆದ ’ ವರನ್ನು ವಿಶೇಷಿಸಿರುವುದರಿಂದಲೇ ಈ ಶಬ್ದಕ್ಕೆ ‘ ರಚನೆ ’ ‘ ಕವಿತೆ ’ ಎಂಬ ಅರ್ಥವು ವಿಶದ. ‘ [ಶಾಸನವ] ಹೇಳಿದ ಕವಿ ಹಂಸದೇವ (Ep. Carn., Vol. XII, ಚಿಕ್ಕನಾಯಕನಹಳ್ಳಿ, 32) ‘ ಪೇಳ್ದನಜುನ್ತಿಯಿಂ ಸಾಸನಮಂ’ (Ibid, Vol. IV, ನಾಗಮಂಗಲ, 28) ‘ ನಿರ್ಮಿಸಿದಂ ಕವಿನಾಗದೇವನ್ (Ibid, Vol. VI, ಕಡೂರು, 95) ಎಂಬೆಡೆಯಲ್ಲಿಯೂ ‘ ರಚಿಸಿದ ’ ಎಂಬರ್ಥದಲ್ಲೇ ‘ ಹೇಳಿದ ’ ‘ ಪೇಳ್ದ ’ ‘ ನಿರ್ಮಿಸಿದ ’ ಎಂಬ ಕ್ರಿಯಾಪದಗಳು ಉಪಯೋಗಿಸಲ್ಪಟ್ಟಿವೆ.

ಶಾಸನಗಳ ಮಾತಂತಿರಲಿ. ಕನ್ನಡ ಸಾಹಿತ್ಯದಲ್ಲಿಯೂ ‘ ರಚಿಸು ’ ಎಂಬರ್ಥದಲ್ಲಿ ಮೇಲೆಕಂಡ ಶಬ್ದಗಳೇ ಅಲ್ಲದೆ ಇನ್ನೂ ಅನೇಕ ಶಬ್ದಗಳು ಕಾಣಬರುವುವು. ಜನವಶ್ಯದಲ್ಲಿ ‘ ಅಚಿಪವರ ಮಿಳ್ಳಿರ್ದ ಯೆನಿಂಬುಗೊಳ್ವಂತೆ ಬರೆದಂ ’ ಎಂದು ಕಲ್ಲರಸನೂ (Lives of Kannada Poets, Vol. II, p. 93), ಛಂದೋಂಬುಧಿಯಲ್ಲಿ (p. 4) ‘ ಪೇಳಲೊಡರ್ಚಿದೆನೀ ಪ್ರಬಂಧಮಂ ’ ಎಂದು ನಾಗವರ್ಮನೂ, ಪಂಚತಂತ್ರದಲ್ಲಿ ‘ ಪ್ರೊಸತಾಗಿರೆ ವಿರಚಿಸುವೆಂ’ ಎಂದು ದುರ್ಗಸಿಂಹನೂ (Lives of Kannada Poets, Vol. I, p. 128), ಉದ್ಭಟಕಾವ್ಯದಲ್ಲಿ ‘ ಕೌತೂಹಲದಿನೀ ರುಚಿರಪ್ರಬಂಧಮಂ ’ ಎಂಬದಾಗಿ ಸೋಮರಾಜನೂ (Ibid, p. 272), ಧರ್ಮನಾಥಪುರಾಣದಲ್ಲಿ ‘ ನಿರ್ಮಿತಮಪ್ಪ ’ ಎಂದು ಮಧುರನೂ (Ibid, p. 348) ಬರೆದಿರುವರು. ಇದೇ ಅರ್ಥದಲ್ಲಿಯೇ ಮಂಗರಸ ‘ ನುಸುರಿದನು’; ಜನ್ನನು ‘ ಮಾಡಿದನು ’ ; ಮಲ್ಲಿಕಾರ್ಜುನನು ‘ ಸಂಯೋಜಿಸಿದನು ’ ; ಮತ್ತೊಬ್ಬ ಮಲ್ಲಿಕಾರ್ಜುನನು ‘ ಸೊಲ್ಲಿಸಿದನು ’. ಆದಕಾರಣ ಬರೆದ, ಪೇಳ್ದ, ಹೇಳಿದ, ಉಸಿರ್ದ, ಲಿಖಿತ, ಬರೆಪ ಎಂದರೆ ‘ ಕವಿತೆಯನ್ನು ಮಾಡಿದ ’ ನೆಂದು ಅರ್ಥವೇ ಹೊರತು ‘ ಕೆತ್ತಿದನು ’ ‘ ಓದಿಹೇಳಿದನು ’ ‘ ಪ್ರತಿಮಾಡಿದನು ’ ಎಂದು ಅರ್ಥವಾಗಲಾರದು. ಕೆತ್ತಿದನು ಎಂಬುದಕ್ಕೆ ಶಾಸನಗಳಲ್ಲಿ ‘ ಕಣ್ಡರಿಸಿದ ’ ‘ ಹೊಯ್ದ ’ ‘ ಕಡಿದ ’ ‘ ಕಡದ ’ ‘ ಬೆಸಗೆಯ್ದ ’ ಎಂಬ ಪ್ರತ್ಯೇಕ ಶಬ್ದಗಳು ಉಪಯೋಗಿಸಲ್ಪಟ್ಟಿವೆ.

---

# INDEX TO THE PREFACE.

## ಅನುಕ್ರಮಣಿಕೆ.

---

